ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೩೫

# ಕುಮಾರವ್ಯಾಸ ವಾಣಿ

(ಕನ್ನಡಭಾರತದಿಂದ ಆಯ್ಕೆಗಳು)

ಎಸ್. ವಿ. ರಂಗಣ್ಣ, ಎಂ.ಎ.



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೨

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭ ವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕ ಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚುವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳ ಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿ ದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕ ಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್‌ಸೆಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು; ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು

ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅಪರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗ ಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು, — ಇ. ಜಿ. ಮೆಕಾಲ್ಪೈನ್,

ತಾ॥ ೨೪-೪-೧೯೪೨. — ವೈಸ್-ಛಾನ್ಸೆಲರ್

# ಪೀಠಿಕೆ

ಪ್ರಚಾರಪುಸ್ತಕಮಾಲೆಯಲ್ಲಿ ಆರನೆಯದಾದ "ಕುಮಾರವ್ಯಾಸ" ವಿಮರ್ಶಾಗ್ರಂಥಕ್ಕೆ ಈ "ಕುಮಾರವ್ಯಾಸ ವಾಣಿ" ಒಂದು ಅನುಬಂಧ. ಅಲ್ಲಿ ಕವಿಯ ಹಿರಿಮೆಯನ್ನು ಕುರಿತು ಉಚ್ಚರಿಸಿರುವ ಅಭಿಪ್ರಾಯಗಳಿಗೆ ಇಲ್ಲಿ ಆದಷ್ಟು ಉದಾಹರಣೆಗಳನ್ನು ಕಾಣಬಹುದು. ಸನ್ನಿವೇಶಗಳನ್ನು ಗುರುತಿಸುವ ದಪ್ಪಕ್ಷರದ ಕೆಲವು ಸೂಚನೆಗಳು ವಿನಾ ಮೂಲ ಪುಸ್ತಕ ವೆಲ್ಲ ಕವಿಯ ಬರೆವಣಿಗೆಯೇ. ಕವಿವಾಣಿಯನ್ನು ಸಾಧ್ಯವಾದ ಕಡೆಯಲ್ಲಿ ಪದ್ಯರೂಪವಾಗಿಯೂ ಮಿಕ್ಕ ಕಡೆಯಲ್ಲಿ ಗದ್ಯರೂಪವಾಗಿಯೂ ಅಚ್ಚು ಹಾಕಿದೆ. ಆದರೆ ಎಲ್ಲವೂ ಕವನ, ಕುಮಾರವ್ಯಾಸನ ಕವನ. ಸುಲಭವಲ್ಲ ವೆಂದು ತೋರಿಬಂದ ಕೆಲವು ಪದಗಳಿಗೆ ಅರ್ಥವನ್ನು ಮಗ್ಗುಲಲ್ಲಿಯೇ ಸಣ್ಣಕ್ಷರದಲ್ಲಿ ಕೊಟ್ಟಿದೆ. ಕುಮಾರವ್ಯಾಸನ ಕನ್ನಡ ಪ್ರಯೋಗ ಪ್ರಬಲ ವೈಶಿಷ್ಟ್ಯದಿಂದ ಕಾಂತಿಯುಕ್ತವಾದುದು. ಆದ್ದರಿಂದ ಕಾವ್ಯವಸ್ತುವಿನ ಸಮಯ ಸಂದರ್ಭಗಳನ್ನರಿತು, ಕವಿಯ ಮನೋಧರ್ಮವನ್ನು ನೆನೆದು, ಅವನ ಪದಗಳಿಗೆ ಅರ್ಥ ಕಲ್ಪಿಸಬೇಕು. ವ್ಯಾಕರಣದ ವಿಚಾರವೂ ಹಾಗೆಯೇ. ಕುಮಾರವ್ಯಾಸನದೇ ಒಂದು ವ್ಯಾಕರಣವೆಂಬುದನ್ನು ಮರೆಯಬಾರದು.

ಬಲ್ಲವರಿಗೆಲ್ಲ ಈ ಸಂಗ್ರಹ ಒಪ್ಪಾಗುತ್ತದೆಂದು ನಂಬಲಾರೆ. ಕವಿಯ ಸೊಬಗಿಗೆ ನನ್ನಂತೆಯೇ ಮನಸೋತ ಆಪ್ತಮಿತ್ರರ ಪ್ರೋತ್ಸಾಹಬಲದಿಂದ ನಾನು ಈ ಪ್ರಕಟಣೆಗೆ ಕೈ ಹಾಕಿದೆ. ಹನುಮಂತರಾವ್, ಹರಿಯಪ್ಪ, ವೆಂಕಟರಾಮಪ್ಪ,—ಇವರಿಗೆ ನಾನು ವಿಶೇಷ ಋಣಿ.

ಲೇಖನವನ್ನು ತಿದ್ದುವುದರಲ್ಲಿ ನೆರವಾದ ಸಂಪಾದಕಮಂಡಲಿಗೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಹೊಸತರಹದ ಈ ಪುಸ್ತಕವನ್ನು ತಾಳ್ಮೆಯಿಂದಲೂ ದಕ್ಷತೆಯಿಂದಲೂ ಅಚ್ಚುಕಟ್ಟಾಗಿ ಮುದ್ರಣಮಾಡಿ ಕೊಟ್ಟ ಶ್ರೀ ಪಂಚಾಚಾರ್ಯ ಮುದ್ರಣಶಾಲೆಯವರಿಗೆ ನನ್ನ ಅನಂತ ಧನ್ಯವಾದಗಳು.

ಬೆಂಗಳೂರು,
ಶ್ರೀರಾಮನವಮಿ,
ಚಿತ್ರಭಾನು ಸಂವತ್ಸರ.

**ಎಸ್. ವಿ. ರಂಗಣ್ಣ**

# ವಿಷಯ ಸೂಚಿ

# ನಾಂದಿ

ಶ್ರೀವನಿತೆಯರಸನೆ ವಿಮಲ ರಾ
ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ ॥
ರಾವಣಾಸುರ ಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ ॥೧॥

ವೀರನಾರಾಯಣನೆ ಕವಿ ಲಿಪಿ
ಗಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮು ಜನಾರ್ದನರು ॥
ಚಾರುಕವಿತೆಯು ಬಳಕೆಯಲ್ಲ ವಿ
ಚಾರಿಸುವೊಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ ॥೨॥

ದುರಿತ ಕುಲಗಿರಿ ವಜ್ರದಂಡನು
ಧರೆಯು ಜಂಗಮುಮುಕುತಿ ಕವಿವಾ
ರಿರುಹ ದಿನಮಣಿ ನಿಖಿಲ ಯತಿಪತಿ ದಿವಿಜ ವಂದಿತನು ॥
ತರಳನನು ತನ್ನವನೆನುತ ಪತಿ
ಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸ ಗುರುರಾಯ ॥೩॥

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ ॥
ಬಣಗು ಕವಿಗಳ ಲೆಕ್ಕಿಪನೆ ಸಾ
ಕೆಣಿಸದಿರು ಶುಕರೂಪನಲ್ಲನೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ ॥೪॥

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ ।
ಬಳಸಿ ಬರೆಯಲು ಕಂಠಪತ್ರದ
ಉಲುಹು ಗೆಡದಗ್ಗಳಿಕೆ ಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ ॥೫॥

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ ॥
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ॥೬॥

---

# ಕುಮಾರವ್ಯಾಸ ವಾಣಿ
## (ಕನ್ನಡಭಾರತದಿಂದ ಆಯ್ಕೆಗಳು)

## ೧. ಶ್ರೀ ಕೃಷ್ಣ

ಕುಮಾರವ್ಯಾಸನ ಕನ್ನಡ ಭಾರತಕ್ಕೆ ಶ್ರೀಕೃಷ್ಣನೇ ನಾಯಕ. ಅವನು ಭೂಮಿಯ ಭಾರವನ್ನು ಇಳಿಸುವುದಕ್ಕೆ ಅವತರಿಸಿದ ಮಹಾವಿಷ್ಣು. ಅದನ್ನು ಭಾರತದ ಎಲ್ಲ ವೀರರೂ ಬಲ್ಲರು. ತಮ್ಮ ಅಂತರಾಳದಲ್ಲಿ ಕುಳಿತುಕೊಂಡಿರುವ ಆ ಕೃಷ್ಣಪರಮಾತ್ಮ ಪ್ರೇರಿಸುವಂತೆ ಅವರು ಆಚರಿಸಬೇಕೇ ಹೊರತು ಅವರಿಗೆ ಬೇರೆ ಸ್ವಾತಂತ್ರ್ಯವಿಲ್ಲ. ಅಂದರೆ ಕೌರವ ಕರ್ಣಾದಿಗಳು ಅವನ ಶತ್ರುಗಳಾಗಿ ಪಾಂಡವರಲ್ಲಿ ಅಸೂಯೆಯನ್ನೂ ಹಗೆತನವನ್ನೂ ತೋರಿಸದೆ ಯತ್ನವಿಲ್ಲ. ಹಾಗೆಯೇ ಪಾಂಡವರು ಅವನಲ್ಲಿ ಕುಂದಿಲ್ಲದ ಭಕ್ತಿಯನ್ನುಳ್ಳವರು. ಅವರಿಗೆ ಬಂದ ಕಷ್ಟಗಳನ್ನು ನಿವಾರಣೆಮಾಡಿ ಸಂತೋಷವನ್ನುಂಟುಮಾಡಿಕೊಡುವುದೇ ಭಾರತದಲ್ಲಿ ಕೃಷ್ಣನ ಬೆಸನ. ಪಾಂಡವರಲ್ಲಿಯೇ ಅಲ್ಲದೆ ವಿದುರ ಭೀಷ್ಮಾದಿ ಇತರ ಭಕ್ತರಲ್ಲಿಯೂ ಕೃಷ್ಣನಿಗೆ ವಾತ್ಸಲ್ಯ. ಅಲ್ಲದೆ ದುರ್ಯೋಧನಾದಿ ಶತ್ರುಗಳಲ್ಲಿಯೂ ಅವನಿಗೆ ಕರುಣೆಯುಂಟು. ಕಡೆಯಲ್ಲಿ ಅವರಿಗೂ ಮುಕ್ತಿಯನ್ನು ಕೊಡತಕ್ಕವನು.

ಹೀಗಿದ್ದರೂ ಮನುಷ್ಯಾಕೃತಿಯನ್ನು ತಾಳಿರುವುದರಿಂದ ಲೋಕರೂಢಿಯನ್ನು ಅನುಸರಿಸಿ ಶ್ರೀಕೃಷ್ಣ ವಿನಯಶೀಲನಾದ ಮನುಷ್ಯನಂತೆಯೇ ನಡೆದುಕೊಳ್ಳುತ್ತಾನೆ.

ಈ ಕೆಲವು ಅಂಶಗಳನ್ನು ಈ ಪದ್ಯಗಳಿಂದ ತಿಳಿಯಬಹುದು.

### ಪಾಂಡವರು ದ್ರೌಪದಿಯನ್ನು ಪಡೆದ ತರುವಾಯ

ಬಂದನಲ್ಲಿಗೆ ಸಕಲ ಯಾದವ
ವೃಂದಸಹಿತ ಮುರಾರಿ ಕುಂತೀ
ನಂದನರು ಬರಲಿದಿರುಗಾಣಿಸಿಕೊಂಡರುಚಿತದಲಿ ||

ಮಗನೆ ಧರ್ಮಜ ಕೇಳು ಭೀಮಾ
ದಿಗಳೆ ಹರಿಯೆಮ್ಮಣ್ಣದೇವನ
ಮಗನು ಸೋದರಮಾವ ನೀತನು ನಿಮಗೆ ವಸುದೇವ ||
ವಿಗಡರೀ ಯಾದವನೃಪರು ಬಂ
ಧುಗಳು ನಿಮಗೆಂದ್ಯೆವರನು ಕೈ
ನೆಗಹಿ* ಕಮಲೋದರನ ಕೈಯಲಿ ಕೊಟ್ಟಳಾ ಕುಂತಿ || *ಎತ್ತಿ

**ಪಾಂಡವರಲ್ಲಿ ಕೃಷ್ಣನು ನಡೆದುಕೊಳ್ಳುತ್ತಿದ್ದ ಬಗೆ**

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀತನಯರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುವಲಾ ||
ಶ್ರೀ ಲತಾಂಗಿಯ ರಮಣ ನನಿಬರೊ
ಳಾಳೊಡೆಯರಾರೆಂಬ ಭೇದವ
ಬೀಳುಕೊಟ್ಟೀ ನಡಸುತಿರ್ದನು ತನ್ನ ವೈದುನರ ||

ಹೋಲಿಕೆಗೆ ಬಾಯಾರಿ ವೇದದ
ತಾಳಿಗೆಗಳೊಣಗಿದುವು ಘನತೆಯ *ನಾಲಗೆ
ಮೇಲೆ ತನ್ನದು ಘನತೆಯೆಂಬುದ ನತ್ತ ಜೇರಿರಿಸಿ ||
ಕಾಲಿಗೆರಗುವನಾ ಯುಧಿಷ್ಠಿರ
ನೇಳಲೊಡನೇಳುವನು ಕೃಷ್ಣನ
ಲೀಲೆ ಯನುಪಮವೆಂದು ವೈಶಂಪಾಯಮುನಿ ನುಡಿದ ||

**ಅರ್ಜುನ ಯಾದವ ಮಹಾಸೇನೆಯನ್ನು ಒಲ್ಲದೆ ಕೃಷ್ಣನನ್ನು ಆರಿಸಿಕೊಂಡಮೇಲೆ " ದನುಜರಿಪು ನಸುನಗುತ ಇಂತೆಂದನು ಧನಂಜಯಗೆ."**

ಸುರಿಗೆ*ಯನು ಬಿಸುಟೊರೆಯನಂಗೀ *ಕತ್ತಿ
ಕರಿಸಿದ ವೊಲಿಂದಾಹವದ† ಧರ †ಯುದ್ಧ
ಧುರದ ಯಾದವ ಬಲವ ನೊಲ್ಲದೆ ಮಂದಮತಿಯಾಗಿ ||
ಮುರುಳಿ ಕಾದದ ಕಟ್ಟದೆಮ್ಮನು
ಬರಿದೆ ಬಯಸಿದೆ ಯಿದನು ಕೇಳ್ವೊಡೆ
ಮುರುಳುಗುಟ್ಟದೆ ಮಾಣ್ಬರೇ ನಿಮ್ಮಣ್ಣ ತಮ್ಮದಿರು ||
ಎನಲು ಗಹಗಹಿಸಿದ ನಿದಾರಿಗೆ
ಮನವ ಕದ್ದಾಡುವಿರಿ ನಿಜ ಶಿ
ಷ್ಯನಲಿ ನಾಟಕದಿಂದ್ರಜಾಲವೆ ನಿಮ್ಮ ಗರುಡಿಯೊಳು ||
ಎನಗೆ ಶ್ರಮವುಂಟದು ನಿಲಲಿ ಯೆ
ನ್ನನುಜರಗ್ರಜರರಿಯರೇ ನಿ
ಮ್ಮನುಪಮಿತ ಮಹಿಮಾಲಂಬನವೆಂದನಾ ಪಾರ್ಥ ||
ನಾವು ಬರಿಗೈಯವರು ಬರಲೆಮು
ಗಾವು ದಲ್ಲಿಯ ಕೆಲಸ ವುಂಡುಂ
ಡಾವು ಕುಳ್ಳಿಹೆವಲ್ಲಿ ಹಂಗಾಗಿಹೆವು ಕಟಕ†ದೊಳು || †ಸೈನ್ಯ
ದೇವರೆಂದೇ ನೀವು ಬಗೆವಿರಿ
ದೇವತನ ವೆಮ್ಮಲ್ಲಿ ಲವವಿ
ಲ್ಲಾವು ಬಾರೆವು ಬಂದು ಮಾಡುವುದೇನು ಹೇಳೆಂದ ||
ದೇವ ಮಾತ್ರವೆ ನೀವು ದೇವರ
ದೇವರೊಡೆಯರು ಹೊಗಳುವಡೆ ವೇ
ದಾವಳಿಗಳಳವಲ್ಲ ಸಾಕಾ ಮಾತದಂತಿರಲಿ ||
ನಾವು ಭಕ್ತರು ಭಕುತ ಭೃತ್ಯರು
ನೀವು ಸಾರಥಿಯಾಗಿ ಭೃತ್ಯರ
ಕಾವುದೆಂದರ್ಜುನನು ಹಣೆಚಾಚಿದನು ಹರಿಪದಕೆ ||

ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂಡನು ಕೃಪಾಳುವಿ
ನನುನಯವ ನಾವೆತ್ತ ಬಲ್ಲೆವು ? ||

## ದೂರ್ವಾಸ ಬಂದು ಭೋಜನವನ್ನು ಕೇಳಿದಾಗ

ಧರಣಿಯನು ಬಿಡದಳೆದು ಹೆಚ್ಚಿದ
ಚರಣವಿದು ಸುರನದಿಯ ಸೃಜಿಸಿದ
ಚರಣವಿದು ಕಲ್ಲಾದಹಲ್ಯಾ ಶಾಪ ನಿರುಹರಣ ||
ಚರಣವಿದು ಕಾಳಿಂಗಮರ್ದನ
ಚರಣವಿದು ಶಕಟ ಪ್ರಭಂಜನ
ಚರಣವಿದೆನುತ ಮುಗುದೆ ಕೊಂಡಾಡಿದಳು ಹರಿಪದವ ||

ಗಾತ*ಕೀಗಳು ಸಮಯವೇ ಹೇ *ಗಾಥ, ಸ್ತೋತ್ರ
ಳೀತಕೀ ಸ್ತುತಿ ಯಂತರಂಗದ
ಲಾತುರ ವಿದೇನೆನುತ ಹಿಡಿದೆತ್ತಿದನು ಬಾಲಿಕೆಯ ||

ಶೌರಿ ಕೇಳ್ ಸಾಕ್ಷಾತ್ತು ಶಿವನವ
ತಾರವಹ ದೂರ್ವಾಸಮುನಿ ಪರಿ
ವಾರ ಸಹಿತೈತಂದೊಡಭ್ಯಾಗತೆಯ ನೃಪನಿತ್ತ ||
ತೀರಿತಕ್ಷಯದನ್ನ ವಿಂದು ಮ
ಹಾರುಷಿಗೆ ಯಾಹಾರ ನಿನ್ನಯ
ವೀರ ಮೈದುನರೆಂದು ಬಿನ್ನೈಸಿದಳು ನಳಿನಾಕ್ಷಿ ||

ನಾವು ಹಸಿದೈತಂದೊಡೀ ಪರಿ
ದೇವಿ ನಾನಾ ದೂರ ದೂರುವು
ದಾವುದುಚಿತವು ಹೇಳೆನಲು ನಡುನಡುಗಿ ಕೈಮುಗಿದು ||

ದೇವ ನಿಮ್ಮಯ ಹಸಿವ ಕಳೆವೊಡೆ
ಭಾವಶುದ್ಧಿಯ ಭಕುತಿ ಬೇಹುದು
ನಾವು ಚಂಚಲಚಿತ್ತರೆಂದಳು ಕಮಲಮುಖಿ ನಗುತ ||

ಬೀತ* ತರು ಶುಕನಿಕರ ಕೀವುದೆ *ಗೊಡ್ಡಾದ
ಯೌತಣವ ಸಲೆ ತುಷ್ಟಿಬಡಿಸುವ
ನೀತಿಯನು ನೀ ಬಲ್ಲೆಯೆಂದಳು ಕಮಲಮುಖಿ ನಗುತ ||

ಮಾತುಗಳು ಸೊಗಸುವುವೆ ಹಸಿವಿಂ
ದಾತುರರಿಗೆಲೆ ತಂಗಿ ತಾರೌ
ಪ್ರೀತಿವಿದರೊಲಿದಿತ್ತುದೇ ಕ್ಷುಧೆಗಮೃತಪುಂಜವದು ||
ಏತಕೀ ಜಂಜಡವೆನಲು ಜಲ
ಜಾತಮುಖಿ ಕಂಪಿಸುತ ಕುಮುದಾ
ರಾತಿ* ಕೊಟ್ಟಾ ಸ್ಥಾಲಿಯನು ತಡವಿದಳು ಕರದಿಂದ ||*ಸೂರ್ಯ

ಕಂಡು ಕಿಂಚಿತ್ಶಾಕಶೇಷವ
ಕೊಂಡುಬಂದರೆ ಕೃಷ್ಣನದ ಕೈ
ಕೊಂಡು ತಾನದನುಂಡು ತಲೆದೂಗಿದನು ತೇಗಿದನು ||
ಪಾಂಡವರ ಪತಿಕರಿಸಿ ನಲಿವುತ
ಜಾಂಡ ನುಡಿದನು ಹೃದಯ ಕ್ಷುಧೆಯನು
ಖಂಡಿಸಿದೆಲಾ ಯೆನುತ ಕೊಂಡಾಡಿದನು ಕೋಮಲೆಯ ||

## ರಾಜಸೂಯಾಂತ್ಯದಲ್ಲಿ ಭೀಷ್ಮಮಾಡಿದ ಕೃಷ್ಣಪ್ರಶಂಸೆ

ಘನರಜೋಗುಣದಲ್ಲಿ ಚತುರಾ
ನನ ತಮೋಗುಣದಲ್ಲಿ ಶಂಕರ
ನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ ||

ಘನಜಗನ್ಮಯನಾಗಿ ಸರ್ವಾ
ತ್ಮನು ಮಹೇಶ್ವರನೆನಿಪನೀತನ
ನೆನಹನೀತನ ನಿಜವನರಿವ ಮಹಾತ್ಮನಾರೆಂದ ||

ಯಜ್ಞದಧಿಪತಿಯಿಾತ ನೀತನು
ಯಜ್ಞಪುರುಷನು ಸ್ರುಕ್ಸ್ರುವಾದಿ*ಯು *ಹೋಮದ ಉಪಕರಣ
ಯಜ್ಞಸಾಧನವೀತ ನೀತನು ಮಂತ್ರಕಾಲಾತ್ಮ ||
ಯಜ್ಞವೀತನು ಕರ್ಮವೀತನು
ಯಜ್ಞದಲಿ ಯಜಮಾನನೀತನು
ಯಜ್ಞಫಲವೀ ದೇವಕೀಸುತನೆಂದನಾ ಭೀಷ್ಮ ||

ಗಗನ ವೀತನ ನಾಭಿ ವಶದಿ
ಕ್ಕುಗಳು ಕಿವಿ ಫಣಿಲೋಕ ವಿಮಳಾಂ
ಘ್ರಿಗಳು ಧ್ರುವನಿಂ ಮೇಲುಭಾಗ ಮುರಾಂತಕನ ಮುಕುಟ ||
ಗಗನಮಣಿ ಶಂಕರ ವಿರಿಂಚಾ† †ಬ್ರಹ್ಮ
ದಿಗಳು ದೇವನ ರೋಮಕೂಪದೊ
ಳಗಣಿತಾಮರ ನಿಕರ ವಿಹುದಿದ ನರಿವರಾರೆಂದ ||

ವಿಶ್ವಶಿಲ್ಪದ ಕುಶಲಹಸ್ತನು
ವಿಶ್ವರಕ್ಷೆಯ ಮಂತ್ರವಾದಿಯು
ವಿಶ್ವಸಮಿಧೆಯೊಳಗ್ನಿಕಾರ್ಯದ ಬೊಮ್ಮಚಾರಿ ಪಟು ||
ವಿಶ್ವನಾಟಕ ಸೂತ್ರಧಾರನು
ವಿಶ್ವ ವಿಸ್ಮಯ ದೈಂದ್ರಜಾಲಿಕ
ವಿಶ್ವದಂತಸ್ಸ್ಯೂತ ಚೇತನ ನೀತ ನೋಡೆಂದ ||

## ಸಂಧಾನಪ್ರಯತ್ನಗಳು ನಡೆಯುತ್ತಿರುವಾಗ

ಬೇಡ ಮಗನೇ ಕೃಷ್ಣರಾಯನು
ರೂಡಿಸಿದ ಕಟ್ಟಾಳು ಕೆಲಕೆಲ
ರಾಡುವರು ಸಾಕ್ಷಾತು ಲಕ್ಷ್ಮೀಕಾಂತ ಹರಿಯೆಂದು ||
ಕೂಡಿಕೊಂಡಿಹನಾತ ನವರನು
ಕೇಡನೊಂದನು ಮಾಡಲೀಯನು
ನಾಡನೊಪ್ಪಿಸು ಮಗನೆ ಯೆಂದನು ಬೆದರಿ ಧೃತರಾಷ್ಟ್ರ ||

ಮರುಳುಗಳಲಾ ಜೊಪ್ಪಸವರೀ
ಮುರಹರನು ಹರಿಯೆಂದು ಮುನ್ನದ
ನರಿದಿಹೆನು ನೀವಂಜದಿರಿ ನಿಮಗಾಗದವಸಾನ ||
ಗುರುನದೀಸುತ ಮುಖ್ಯರಿರಲೀ
ಕುರುಕುಲಕೆ ಕೇಡಹುದೆ ಕೊಲುವೊಡೆ
ಸುರಪತಿಯ ಸುತನಳವೆಯೆಂದನು ಕೌರವರ ರಾಯ ||

ಭಾರ ಹೆಚ್ಚಿದೊಡೊರಲಿ ಧರಣೀ
ನಾರಿ ಬಿನ್ನಹಮಾಡಿದೊಡೆ ದೈ
ತ್ಯಾರಿ ಬಿಜಯಂಗೈದನಿಲ್ಲಿಗೆ ಮನುಜವೇಷದೊಳು ||
ಭೂರಿ ದೈತ್ಯರನೊರಸಿದನು ಕೈ
ಯಾರೆ ಬಳಿಕರ್ಜುನನ ಕೈಯಲಿ
ಕೌರವರ ಕೊಲಿಸುವನು ನಾವಿನ್ನಂಜಲೇಕೆಂದ ||

ಈ ಹರಿಯ ನುಡಿಗೇಳು ದೈವದ
ಮೋಹ ತಪ್ಪಿದ ಬಳಿಕ ಸುಭಟರ
ಸಾಹಸದೆ ಹುರುಳಿಲ್ಲ ನಂಬದಿರೆಮ್ಮ ಬಲುಹುಗಳ ||

ಬಾಹಿರವ ನೀನಾಡದಿರು ವೈ
ದೇಹಿಯನು ಸೆರೆಯೊಯ್ದ ಸ್ವಾಮಿ
ದ್ರೋಹಿಯನು ಹೋಲದಿರು ಕೌರವ ಎಂದನಾ ಭೀಷ್ಮ ||

ಧರ್ಮವಶದೊಳು ದೈವವಿಹುದಾ
ಧರ್ಮವಶದೊಳು ಜಯದ ಜೋಡಣೆ
ಧರ್ಮವಶದೊಳು ಸಕಲ ಸತ್ಯಜ್ಞಾನ ಸುಖವಿಹುದು ||
ಧರ್ಮವನು ಪಾಲಿಸುವೊಡಾ ಸ
ದ್ಧರ್ಮ ಪಾಂಡವ ಭೂಮಿಪಾಲರೊ
ಳುಮ್ಮಹವ* ಬಿಡು ಮಗನೆ ಯೆಂದನು ನೃಪಗೆ ಧೃತರಾಷ್ಟ್ರ ||

* ಮನಸ್ತಾಪ

ಕೊಡು ನಿನಗೆ ಮನ ಬಂದುದೊಂದನು
ನಡೆಸಿ ಕೊಡುವೆನು ಪಾಂಡವರೊಳವ
ಗಡೆಯತನ ಬೇಡಿನ್ನು ಕೇಳೆಂದಸುರರಿಪು ನುಡಿದ ||

ಬೇಡಲರಿಯನು ಮಾನನಿಧಿ ಕೊಂ
ಡಾಡಲೇಶಕೆ ಧರೆಯನೀರಡಿ
ಮಾಡಿಕೊಂಡ ಮಹಾತ್ಮ ನಿನಗಂಜುವೆನು ನಾನೆಂದ ||

ಕರೆದು ಮೂರಡಿನೆಲನ ಧಾರೆಯ
ನೆರೆದ ಬಲಿ ತಳಕಿಳಿದನೆನ್ನೀ
ಧರೆಯೊಳೈದೂರುಗಳನಿತ್ತೆನಗಾವ ಪದವಹುದೋ ||
ಪರಮಪುರುಷನು ನೀನು ನಿನಗಾಂ
ಶರಣುಹೊಕ್ಕೆನು ಬಂದ ಪಥದಲಿ
ಮರಳಿ ಬಿಜಯಂಗೈವುದೆಂದನು ನಗುತ ಕುರುರಾಯ ||

ಎರಡು ಬಲವನು ಮಸೆದು ಕೊಲಿಸುವ
ಭರವು ಯಾದವನದು ನಿದಾನಿಸ
ಲರಿ ನಮಗೆ ಮುರವೈರಿಯಲ್ಲದೆ ಪಾಂಡುನಂದನರೆ ॥
ತರಿಸಿ ಹುರಿನೇಣುಗಳೊಳೀತನ
ಕರವೆರಡ ನೆರೆ ಬಿಗಿದೊಡವದಿರು
ಕೆರಳಿ ಮಾಡುವುದಾವುದೆಂದನು ಕೌರವರ ರಾಯ ॥
ತಿಳಿಯಲುಂಟಿಲ್ಲೆಂಬ ಮಾಯೆಯ
ಬಳವಿಗೆಗೆ ಜನಮನವ ಬಂಧಿಸಿ
ತೊಲಗಿದಾತನ ಹಿಡಿದು ಬಂಧಿಸಲೆಂದು ನೆಗಳಿದರು* ॥

* ಯತ್ನಿಸಿದರು

ವಿದುರನಿಂತೆನುತಿರಲು ಮಿಂಚಿನ
ಹೊದರು ಹುರಿಗೊಂಡಂತೆ ರವಿಶತ
ವುದುರಿದುವು ವೈಮುರಿದು ನಿಂದೊಡೆ ದೇವನಂಗದಲಿ ॥
ಸದೆದುದಾಸ್ಥಾನವನು ಘನ ತೇ
ಜದೊಳು ಹರಿ ತಾಂ ಲೀಲೆ ಮಿಗೆ ತೋ
ರಿದನು ನಿರುಪಮ ವಿಶ್ವರೂಪವನಾ ಮಹಾಸಭೆಗೆ ॥
ಕಿವಿಗಳೊಳು ಕಂಗಳೊಳು ನಾಸಾ
ವಿವರದೊಳು ಹೊಗೆ ಮಸಗಿ ದಳ್ಳುರಿ
ತಿವಿದುದಾಕಾಶವನು ಕವಿದುದು ಕಾಂತಿ ದೆಸೆದೆಸೆಗೆ ॥
ರವಿಯ ತಗಡೆನೆ ತಳಿತುದಾಯುಧ
ನಿವಹ ಸಾಸಿರಭುಜದ ಬಹುಳತೆ
ಯವಗಡಿಸೆ ವೈಕುಂಠನೆಸೆದನು ವಿಶ್ವರೂಪದೊಳು ॥
ತಾತ ಬೆದರದಿರೀ ಮುಕುಂದನ
ಕೈತವ*ಕೆ ಬೆಚ್ಚದಿರಿ ಸಂಧಿಯ
ಮಾತು ತಾನದು ಹೃದಯವೇ ಬೆಸಗೊಳ್ಳಿ ಮುರಹರನ ॥

* ಕಪಟ

ಈತನಂತರ್ಯಾಮಿ ಜೀವ
ವ್ರಾತದೊಳು ಜನಜನಿತ ಜಗವೆ
ಲ್ಲೀತನಾಜ್ಞೆಯೊಳೊಲೆವುದೆಂದನು ಕೌರವರ ರಾಯ ||

ಕೊಲುವನನ್ಯರನನ್ಯರಿಂದವೆ
ಕೊಲಿಸುವನು ಕಮಲಾಕ್ಷನಲ್ಲದೆ
ಉಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲೆಂದ ||

ನಾವು ಸಂಧಿಯ ನೊಲುವೆವೆಮ್ಮಯ
ಭಾವದೊಳು ಹುಳುಕಿಲ್ಲ ಸಂಪ್ರತಿ* * ಸಂಧಿ
ದೇವನಭಿಮತವಲ್ಲ ಬಲ್ಲೆನು ಮುರಹರನ ಮನವ ||

ಮಣಿದು ಬದುಕುವನಲ್ಲ ಹಗೆಯೊಳು
ಸೆಣಸಿ ಬಿಡುವವನಲ್ಲ ದಿಟ ಧಾ
ರಿಣಿಯ ಸಿರಿಗೆಳಸುವವನಲ್ಲಳುಕಿಲ್ಲ ಕಾಯದೊಳು ||
ರಣಮಹೋತ್ಸವವೆನ್ನ ಮತ ಕೈ
ದಣಿಯೆ ಹೊಯ್ದಾಡುವೆನು ಕೃಷ್ಣನ
ಕೆಣಕಿದಲ್ಲದೆ ವಹಿಲಕೆದೊಳು ಕೈವಲ್ಯವಿಲ್ಲೆಂದ|| § ಬೇಗನೆ

**ಪಾಂಡವರಲ್ಲಿಯೇ ಅಲ್ಲದೆ ಇತರ ನಿಜಭಕ್ತರಲ್ಲಿಯೂ ಕೃಷ್ಣನಿಗೆ ಮಮತೆ ಬಹಳ. ಸಂಧಾನಕ್ಕೆ ಬಂದಾಗ**

ತವತವಗೆ ಗಾಂಗೇಯ ಗುರು ಕೃಪ
ರವಿಸುತಾದಿಗಳಸುರರಿಪು ನಿಜ
ಭವನ ಕೈತಹನೆಂದು ಸವೆದರು ಸಾರವಸ್ತುಗಳ ||
ಅವನಿಪನ ಬೀಳ್ಕೊಂಡು ಕೌರವ
ಭವನವನು ಹೊರವಂಟು ವರ ಭಾ
ಗವತ ಮಸ್ತಕ ರತುನ ವಿದುರನ ಮನೆಗೆ ನಡೆತಂದ ||

ನೋಡಿದನು ಮನದಣಿಯೆ ಮಿಗೆ ಕೊಂ
ಡಾಡಿದನು ಬೀದಿಯೊಳು ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಂಗೆಂಬ ಗಾವಳಿ*ಯ ||
*ಅಬ್ಬರ

ಕೂಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆದು ಹರುಷದ
ಗಾಡಿಕೆಯೊಳಪ್ರತಿಮನೆಸೆದನು ಭಕ್ತಿಕೇಳಿಯಲಿ ||

ಹಸಿದು ನಾವೈತಂದರೀ ಪರಿ
ಮಸಗಿ ಕುಣಿದಾಡಿದೊಡೆ ಮೇಣೀ
ವಸತಿಯನು ನೀಂ ಮುರಿದು ಬಿಸುಟೊಡೆ ನಮಗೆ ತಣಿವಹುದೆ ||
ವಸುಮತೀ ವಲ್ಲಭರವರು ಪ್ರಾ
ರ್ಥಿಸಿದೊಡೊಲ್ಲದೆ ಬಂದೆವೈ ನಾ
ಚಿಸದಿರೈ ಬಾ ವಿದುರ ಎನುತೊಳಹೊಕ್ಕನಸುರಾರಿ ||

ಒಲವರವ* ಕೌತುಕವು ಪಾಲ್ಗಡ *ಪ್ರೀತಿಯ
ಲೊಳಗೆ ಮಲಗುವ ವಿಷ್ಣು ವಿದುರನ
ನಿಳಯದೊಳ ಗೊಕ್ಕುಡಿತೆ ಹಾಲೊಳು ಹಸಿವ ನೂಕಿದನು ||

**ಅಂತಿಯೋ ಭೀಷ್ಮನ ವಿಚಾರದಲ್ಲಿಯೂ ವಿಶ್ವಾಸ**

ಹರಿಯ ಸಿರಿಯೊಡಲಿನಲಿ ಸರಳಿನ
ಸರಿವಳೆಯ ಸೈಗರೆಯೆ ಜೋಡಿನ
ಸರಪಳಿಯಲಕ್ಕಾಡಿದುವು ಕಲಿ ಭೀಷ್ಮನಂಬುಗಳು ||

ತುಡುಕಿದನು ಚಕ್ರವನು ರಥದಿಂ
ಪೊಡವಿಯೊಳು ದುಮ್ಮಿಕ್ಕಿದನು ಹ
ತ್ತಡವ ಹಾಯಿಕಿ ಹರಿದನೊಡಬಿದ್ದವರ ನೊಡೆ ತುಳಿದು ||

ಸುಡುವೆನಹಿತಾನ್ವಯವ* ಭೀಷ್ಮನ *ಶತ್ರುವಂಶ
ಕಡಿದು ಭೂತಗಣಕ್ಕೆ ಬೋನವ
ಹಿಡಿವೆ ನೋಡೆನ್ನಲ್ಲಿ ಮೇಳವೆ ಯೆನುತ ಸೈವರಿದ ||
ದೇವ ನಿಮ್ಮಯ ಖಾತಿಪರಿಯಂ
ತಾವು ಲಕ್ಷ್ಯವೆ ಜೀಯ ನೊರಜಿನ
ದೇವಗಿರಿಯಂತರವೆ ಸಂಭಾವನೆಯೆ ನನ್ನೊಡನೆ ||
ದೇವಮುನಿಗಳ ನಗೆಯ ನೋಡದಿ
ದಾವುದುಚಿತವ ಮಾಡಿದಿರಿ ಮಹಿ
ಮಾವಲಂಬವ ಮರೆದುದಕೆ ನಗೆ ಬಂದುದೆನಗೆಂದ ||
ದೇವ ನೀ ದಿಟ ಕೊಲುವಡೆಯು ನಾ
ಸಾವೆನೇ ತಾನಾವನೆಂಬುದ
ದೇವರರಿಯರಲ್ಲೈ ವೃಥಾ ಸಂಭಿನ್ನ ರೋಷದಲಿ ||
ದೇವನಾಮದ ಜೋಡು* ನಮ್ಮನು *ಕವಚ
ಕಾವುದೈ ನೀ ಮುನಿದಡೆಯು ನಿಮ
ಗಾವು ಹೆದರೆವು ನಾಮಧಾರಿಗಳತುಲಬಲರೆಂದ ||
ನಚ್ಚಿನಾಳಿನ ಬಿನ್ನಹಕೆ ಹರಿ
ಮೆಚ್ಚಿ ಮನದಲಿ ನಾಚಿ ಚಕ್ರವ
ಮುಚ್ಚಿದನು ಮುರಿದನು ಕಿರೀಟಿಯ ರಥದ ಹೊರೆಗಾಗಿ ||
ಬೆಚ್ಚಿ ಬೆದರುವ ಸೇನೆಗಭಯವ
ಹಚ್ಚಿಕೊಟ್ಟನು ರಾಯ ಭೀಷ್ಮನ
ನಿಚ್ಚಟದ ಭಕ್ತಿಯನು ನೆನೆನೆನೆದೊಲೆದ ಹರಿ ಶಿರವ ||
ಭೀಷ್ಮನೀ ಕಮ
ಲೋದರನ ಕೆರಳಿಚಿದ ಭಕುತಿಯ
ಲಾದರಿಸಿದನು ಪುಣ್ಯವೆಂದನು ಕಮಲಭವ ನಗುತ ||

**ಕಡೆಯ ವಾಕ್ಯ**

ದೇವಸಂತತಿ ನಲಿಯೆ ಪಾಂಡವ
ಜೀವಿ ಹರಿಯೆಂಬೀ ಪ್ರತಿಜ್ಞೆಯು
ಭಾವ ಸಂದುದು ಧರ್ಮಜನ ಪಟ್ಟಾಭಿಷೇಕದಲಿ ||

---

# ೨. ದ್ರೌಪದಿ

ಭಾರತದಲ್ಲಿ ದ್ರೌಪದಿ ಬಹಳ ಮುಖ್ಯಪಾತ್ರ; ಅವಳನ್ನು ನಾಯಕಿಯೆಂದು ಕರೆದರೂ ತಪ್ಪಿಲ್ಲ. ಭಾರತವನ್ನು ಕನ್ನಡದಲ್ಲಿ ಬರೆದಿರುವ ಇತರ ಕವಿಗಳಲ್ಲಿ ಪಂಪ ರನ್ನರು ಅದೇ ಅಭಿಪ್ರಾಯವನ್ನು ಹಿಡಿದಿದ್ದಾರೆ. ಕುಮಾರವ್ಯಾಸ ಕೃಷ್ಣನಿಗೆ ಪ್ರಮುಖಸ್ಥಾನವನ್ನು ಕೊಟ್ಟಿರುವುದರಿಂದ ಇನ್ಯಾರನ್ನೂ ಅವನ ಜೊತೆಯಲ್ಲಿ ಕುಳ್ಳಿರಿಸಲಾರ. ಆದರೂ ದ್ರೌಪದಿಯ ಪ್ರಭಾವವನ್ನು ಕಡಮೆಮಾಡಿಲ್ಲ. ಅವನ ಚಿತ್ರದಂತೆ ದ್ರೌಪದಿ ಅತಿ ದೊಡ್ಡ ಭಕ್ತೆ. ಅವಳ ಇಚ್ಛೆಯನ್ನು ಸಲ್ಲಿಸಲು ಶ್ರೀಕೃಷ್ಣ ಯಾವಾಗಲೂ ಸಿದ್ಧ. ಅವಳಿಗೆ ಅವಮಾನವನ್ನು ಮಾಡಿಯೇ ಕೌರವರು ಕೃಷ್ಣನ ಕೋಪಕ್ಕೆ ತುತ್ತಾಗುವುದು. ಭಕ್ತೆಯ ದುಃಖವನ್ನು ನಿವಾರಿಸಲು ಕೃಷ್ಣ ಉಪಯೋಗಿಸುವ ಸಾಧನಗಳು ಅರ್ಜುನ ಭೀಮರು, ಹೆಚ್ಚಾಗಿ ಭೀಮ.

ದ್ರೌಪದಿಯು ಎಂಥಾ ಹೆಂಗಸೆಂಬುದನ್ನು ಮುಂದಿನ ಪದ್ಯಭಾಗಗಳಲ್ಲಿ ಪರಿಕಿಸಬಹುದು. ಹಾಗೂ ಕವಿಯು ಎಷ್ಟು ಕೌಶಲದಿಂದ ಪಾತ್ರವನ್ನು ಸೃಷ್ಟಿಸುತ್ತಾನೆಂಬುದನ್ನೂ ತಿಳಿಯಬಹುದು.

ವೇದಿ*ಮಧ್ಯವನೊಡೆದು ಮೂಡಿದ
ಳಾದರಿಸೆ ಜನವಮುಮ ಕಾಮನ
ಕೈದು§ವೋ ತ್ರೈಲೋಕ್ಯ ಮೋಹನ ಮಂತ್ರ ದೇವತೆಯೋ ||

*ಜಗಲಿ
§ ಆಯುಧ

ಕಾದುವರೆ ಕರೆ ಹರಿ ಹರ ಬ್ರ
ಹ್ಮಾದಿಗಳಿಗೊರೆ ಯೆಂಬ ಹೂಂಕೃತಿ
ಯಾದುದಾ ಕಾಮಂಗೆ ದ್ರುಪದಾತ್ಮಜೆಯ ಜನನದಲಿ ||

**ಅವಳ ಲಾವಣ್ಯ**

ಪರಮ ಸೌಭಾಗ್ಯದ ಸಮುದ್ರದ ಸಿರಿ, ಮಹಿಳಾಶಿರೋಮಣಿ, ಹೆಂಡಿರೊಳಗತ್ಯುತ್ತಮೋತ್ತಮೆ, ನಳಿನಮುಖಿಯರ ಸಕಳ ಸೃಷ್ಟಿಗೆ ಕಳಸ, ಹೊಗಳ್ವ ಕವಿಯಾರಬುಜ ಲೋಚನೆಯ !

ಹೊರೆಯ ಸಖಿಯರ ನೋಟ ವ್ಯೆಯಲಿ
ಹರಿದು ಬಳಲದು ಚಿತ್ತವೀಕೆಯ
ಧರಿಸಿ ಕುಸಿಯದು ಕಿವಿಗಳಿಗೆ ಮೆಲ್ನುಡಿಯ ಸವಿಸವಿದು ||
ಅರುಚಿಯಾಗದು ನಾಸಿಕವು ವ್ಯೆ
ಪರಿಮಳದ ಪೂರದಲಿ ಗಂಧಾಂ
ತರಕೆ ನೆರೆಯದು ರೂಪನೇನೆಂಬೆನು ನಿತಂಬಿನಿಯ ||

**ಅವಳು ಸ್ವಯಂವರ ಮಂಟಪಕ್ಕೆ ಬಂದಾಗ**

ಈಕೆಯಂದುದಿಸಿರಲು ಮದನಂ
ಗೇಕೆ ದೇಹದ ಬೇಗೆಯಹುದು ಪಿ
ನಾಕಿ ನೆರೆ ವೈರಾಗ್ಯದಲಿ ಹೊಗುವನೆ ತಪೋವನವ ||
ಸಾಕು ಗೌತಮಮುನಿಯ ಮುಳಿಸಿನ
ಕಾಕುನುಡಿ* ಫಲಿಸುವುದೆ ಯೆನುತಾ *ಶಾಪ
ನಾಕಪತಿ* ರಂಭಾದಿ ಸತಿಯರ ನೋಡಿದನು ನಗುತ || *ಇಂದ್ರ

ಗರುವೆಯಿಂಗಿತವರಿದು ದಂಡಿಗೆ
ಮುರಿಯಲೊಡನೈದಿತ್ತು ರಾಯರ
ನೆರವಿ ಕಳುಹುತ ಕಂಗಳಲಿ ಕರಣೇಂದ್ರಿಯಂಗಳಲಿ ||

ಬರಿಯ ಡಿಂಬದ ಡೊಂಬಿನಲಿ ಕೇ
ಸರಿಯ ಪೀಠವನಿಳಿಯದಿರ್ದರು
ಧರಣಿಪರು ಮುರವೈರಿ ಗಂಗಾಸೂನು ಹೊರತಾಗಿ ||
ಮುಡಿಸಿದೆಲೆ ಬೆರಳೊಳಗೆ ಬಾಯೊಳ
ಗಡಸಿದೆಲೆ ಬಾಯೊಳಗೆ ಸಚಿವರ
ನುಡಿಯ ಕೇಳರು ಸುಳಿವ ಕಾಣರು ಲೋಚನಾಗ್ರದಲಿ ||
ಕಡುಮುಳಿದ ಕಂದರ್ಪ ಶರವವ
ಗಡಿಸ* ವೈಗಳನೊಡ್ಡಿ ನೃಪರೆವೆ * ಪೋಲೆ ಬೀಳು
ಮಿಡುಕದಿರ್ದರು ಹೊತ್ತ ದುಗುಡದೆ ಹಾಯ್ದ ಬೆರಗಿನಲಿ ||

**ಅವಳು ಮಹಾಪತಿವ್ರತೆ**

ಬಳಿಕಲಾರೋಗಣೆಯ ಮಾಡಿದ
ರೊಲಿದು ಭಿಕ್ಷಾನ್ನಾದಿ ಭುಕ್ತದ
ಬಳಿಕ ದ್ರೌಪದಿ ಯುಂಡಳೈವರ ಶೇಷದನ್ನವನು ||
ನಳಿನಮುಖಿ ಕೈದೊಳೆದು ಬಂದಾ
ನಿಳಯದಲಿ ಕುಳಿತಿರಲು ಕುಂತಿಯ
ಬಳಿಯ ಕುಳಿತುರೆ ಕಾಲನೊತ್ತಿದಳಾಗ ಸೊಸೆತನದಿ ||

**"ನಗೆನುಡಿಯ ಸಂಮೋಳ ಖೇಳ*ದಲಿ" ಸತ್ಯಭಾಮೆ ಕೇಳುತ್ತಾಳೆ** *ವಿನೋದ

ಅರಸಿ ಕೌತುಕವೆನಗೆ ನೀನೈ
ವರಿಗೆ ಸತಿ ವಲ್ಲಭರ ಚಿತ್ತಾ
ಕರುಷಣವು ನಿನಗೆಂತು ಸೇರಿಹುದೇಕಭಾವದಲಿ ||
ಮಂತ್ರ ಸಿದ್ಧಿಯೊ ಮೇಣು ಶಾಬರ
ಯಂತ್ರರಕ್ಷೆಯೊ ಬಳಿಕಲೌಷಧ
ತಂತ್ರತಿಲಕವೊ ರಮಣರಿವರೈವರ ವಶೀಕರಣ ||

ದೇವಿಯೆಂದಳು ಸತ್ಯಭಾವಮಾ
ದೇವಿಯರು ಮುಗ್ಧೆಯರಲಾ ತಾ
ನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು ||
ಭಾವಶುದ್ಧಿಯಲ್ಲೈವರನು ಸಂ
ಭಾವಿಸುವೆ ನವರವರ ಚಿತ್ತದ
ಭಾವವರಿದುಪಚರಿಸುವೆನು ಚತುರತೆಯ ಚಾಳಿಯಲಿ ||

**ಆದರೂ ಬಹಳ ನೊಂದಾಗ, ಕೋಪದಲ್ಲಿ ಕುದಿದೆದ್ದಾಗ, ಅವಳು ಖಂಡಿತವಾದಿ**

ಪತಿಗಳೆನ್ನನು ಮಾರಿ ಧರ್ಮ
ಸ್ಥಿತಿಯ ಕೊಂಡರು ಭೀಷ್ಮ ಮೊದಲಾ
ದತಿರಥರು ಪರಹಿತವ ಬಿಸುಟಿಹ ರರ್ಥಭೀತಿಯಲಿ ||
ಸುತನ ಕಡುಸಿರಿ ಸೊಗಸಲಾ ಭೂ
ಪತಿಗೆ ಗಾಂಧಾರಿಗೆ ಯನಾಥೆಗೆ
ಗತಿಯ ಕಾಣೆನು ಶಿವಶಿವಾಯೆಂದೊರಲಿದಳು ತರಳೆ ||

ಹಿರಿಯರಿಲ್ಲದ ಸಭೆ ಮನುಷ್ಯರ
ನೆರವಿಯದು ಸಭೆಯಲ್ಲ ಮೂರ್ಖರು
ಹಿರಿಯರಲ್ಲ ಯಥಾರ್ಥ ಭಾಷಣ ಭೀತ ಚೇತನರು ||

**ಅಜ್ಞಾತವಾಸದ ತರುವಾಯ ಸಹದೇವ ವಿನಾ ಮಿಕ್ಕ ಪಾಂಡವರು ಕೌರವನಲ್ಲಿ ಸಂಧಿಯನ್ನು ಅಪೇಕ್ಷಿಸಿದರೆಂಬುದನ್ನು ಕೇಳಿ ದ್ರೌಪದಿ**

ಎಲೆ ಸಮೀರಕುಮಾರ ಸಂಪ್ರತಿ
ಗೆಳಸಿದೈ ಕಲಿತನವ ನೀರೊಳು
ಕಲಕಿದೈ ಕೈವಾರವಾದುದೆ ಕೌರವೇಂದ್ರನೊಳು ||

ಕಲಿಸಿದ್ದೈ ಕೃಷ್ಣಂಗೆ ನೀತಿಯ
ಬಳಸಿದ್ದೈ ಬಹುಮತವ ನರಕದೊ
ಳಿಳಿಸಿದ್ದೈ ಶಶಿಕುಲವ ನೆಂದನಿಲಜನ ನೋಡಿದಳು ||

ಭೀಮ ಬಲವದರಾತಿ ಸೇನಾ |
ಭೀಮ ಕುರುಕುಲ ಕುಸುಮ ಮಾರ್ಗಣ |
ಭೀಮ ಮರೆದೈ ಮಾನಿನಿಯ ಘನಮಾನಹಾನಿಗಳ ||

ಸೋಲ ಗೆಲ್ಲವದೇಕೆ ಕುರುವಂ
ಶಾಳಿಯೊಳು ಸೋದರರು ನೀವ್ ಪಾಂ
ಚಾಲರಾವೇ ಹೊರಗು ನಿಮ್ಮೊಳು ಸಲುಗೆ ನಮಗೇಕೆ ||
ಮೇಳವೇ ಸಿರಿ ಗಳಿಸಲರಿದು ಜ
ನಾಳಿ ಹೆಂಡಿರಪೂರ್ವವೇ ಕ್ಷಿತಿ
ಪಾಲಕರು ನೀವಾಗಲೆಮಗದು ಪರಮಪರಿಣಾಮ ||

ತನಯರೈವರು ವೀರಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯ ನೆನ್ನಯ ತಂದೆ ಮೂರಕ್ಷೋಹಿಣೀ ಸೇನೆ ||
ಇನಿಬರೇ ಕಾಮುವರು ದುಶ್ಶಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ ||

**ಅವಳು ಸೂಕ್ಷ್ಮಬುದ್ಧಿಯ ಚತುರೆ. ಸಭೆಗೆ ಎಳತಂದಾಗ**

ಲಲಿತಬುದ್ಧಿಗಳೇಕೆ ನಾವೇ
ಲಲನೆಯರು ಪತಿ ದಿಟ್ಟೆಯೆನ್ನ
ದಿರೆಲೆ ಸುಯೋಧನ ರಾಜಸಭೆಯಿದು ದೋಷರಹಿತವಲೆ ||

ಗೆಲುವುದೆಂತುಟೊ ತನ್ನ ಸೋಲಿನ
ಬಳಿಕ ಸೋತರೆ ಧರ್ಮಗತಿಯನು
ತಿಳಿದು ಹೇಳಲಿ ತತ್ಸಭಾಸದರೆಂದಳೆಂದುಮುಖಿ ||

### ಗಂಧರ್ವನಿಂದ ಅವಮಾನಿತನಾದ ಕೌರವನ ಬಂಧನವನ್ನು ಬಿಡಿಸಲು ನೇಮಿತಳಾದಾಗ

ಬಂದಳಬುಜಾನನೆ ಸುಯೋಧನ
ನಂದವನು ನೋಡಿದಳು ಸುಯ್ದಳು
ಬೆಂದವಿಧಿ ಬಂಧನವ ತಂದುದೆ ಸಾರ್ವಭೌಮರಿಗೆ ||

ಅಳಲಿಸಿದನೇ ಖಚರ ನಾತನ
ಕೊಲಿಸಬೇಹುದು ಕಳುಹಿ ಕಷ್ಟವ
ಬಳಸಿದಿರಿ ಭೂಪಾಲ ಯೆಂದಳು ನಳಿನಮುಖಿ ನಗುತ ||

ಅರಸ ನೊಂದ್ಯೆ ಮರ್ದನಕೆ ಮ
ಲ್ಲರುಗಳಿಲ್ಲೆಮಗೊತ್ತುವೊಡೆ ಕಲು
ಹರಳು ಮಜ್ಜನ ಮಾಡುವೊಡೆ ಶೀತಾಂಬು ತಿಳಿಗೊಳನ ||
ಹರಿಣ ಶಾರ್ದೂಲಾದಿ ಚರ್ಮಾಂ
ಬರವೆ ಸಮುಕಟ್ಟೆಮಗೆ ರತ್ನಾ
ಭರಣವೇ ರುದ್ರಾಕ್ಷಿ ಯೆಂದಳು ನಗುತ ತರಳಾಕ್ಷಿ ||

ಈ ವಿಪತ್ತಿನ ನಿಮ್ಮಡಿಯ ಸಂ
ಭಾವಿಸುವರೆಮಗಾದ ವಸ್ತುಗ
ಳೀ ವಿಧಿಗಳೇಕೆಮ್ಮ ಬಾಳಿಕೆಯೆಂದು ದುಗುಡದಲಿ ||
ದೇವನಿರ್ಪನು ಧರ್ಮಸುತ ನಿ
ನ್ನಾವುದುಚಿತಾನುಚಿತವೆಂಬುದು
ಭಾವನವರೇ ಬಲ್ಲಿರೆಂದಳು ದ್ರೌಪದೀದೇವೀ ||

ಮಾನಿನಿಯ ಕಟಕಿಯ ಮಹಾಸ್ತ್ರಕೆ
ಮೌನವನು ಮರೆಗೊಂಡು ಕಲುಷ
ಧ್ಯಾನನಿದ್ದನು ಚಿತ್ತದಲಿ ಬೇರೊಂದ ಚಿಂತಿಸುತ ||

**ಶ್ರೀಕೃಷ್ಣನ ಭಕ್ತರಲ್ಲಿ ಅಗ್ರಗಣ್ಯೆ ದ್ರೌಪದಿ. ಸ್ವಯಂವರ ಮಂಟಪ ದಲ್ಲಿ ಕೃಷ್ಣನನ್ನು ಮೊದಲು ದರ್ಶಿಸಿದಾಗ**

ಭಕುತಿಯ ಭಾವರಸದಲಿ
ನನೆದು ಹೊಂಪುಳಿಯಾಗಿ ರೋಮಾಂ
ಚನದ ಮೈಯುಬ್ಬಿನಲಿ ತನುಪುಳಕಾಂಬುಪೂರದಲಿ ||
ಮನದೊಳಗೆ ವಂದಿಸಿದಳೆನಗೀ
ತನಲಿ ಗುರುಭಾವನೆಯ ಮತಿ ಸಂ
ಜನಿಸಿತೇನೆಂದರಿಯೆನೆಂದಳು ಕಮಲಮುಖಿ ನಗುತ ||

**ಕಾಮ್ಯಕವನದಲ್ಲಿ ಪಾಂಡವರನ್ನು ನೋಡಲು ಕೃಷ್ಣ ಬಂದಾಗ**

ನಾರಿ ಬಂದಳು ಕವಿದು ಬಿದ್ದಳು ಹರಿಯ ಚರಣದಲಿ ||
ಏಳು ತಾಯೆ ಮಹಾಸತಿಯೆ ಪಾಂಚಾಲಿ ನೊಂದೌ ತಂಗೆ ಯೆನುತ, ದ್ಯೂತದಲಿ ನಾವಿಲ್ಲಲೇ ಯೆನಲು ;

ಸಕಲ ಜೀವರ ಕರ್ಮಸಾಕ್ಷಿ
ಪ್ರಕಟ ಚೈತನ್ಯ ಸ್ವರೂಪಾ
ತ್ಮಕನು ನೀನೆಲ್ಲಿಲ್ಲ ಹುಸಿಹುಸಿ ಯೆಂದಳಿಂದುಮುಖಿ ||

ದೇವಿ ತಾನಿದನರಿದೊಡಾ ವಸುದೇವನಾಣೆ; ಅತ್ತಲಾ ಕೋಳಾಹಳದಲಿರ ಲಿತ್ತಲಾದುದು ಜೂಜು, ನಿಮ್ಮ ವಿಪತ್ತು ಕಂಡುದು, ಎನಲು

ಮಗನ ಕರೆದರೆ ಯಮುನದೂತರ
ತಗುಳುವಂದು ಸಮೀಪವರ್ತಿಯೆ
ಜಗದುದರ ನೀ ಜಾಣನಹೆ ಯೆಂದಳು ಸರೋಜಮುಖಿ ||

ಆಯಿತೇಳೌ ತಂಗಿ ನೀ ಪಿರಿದಾಯಸವ ನನುಭವಿಸಲುದಿಸಿದೆ;

ವರ ತಪಸ್ವಿನಿ ನೀನು ನಿನ್ನನು
ಕೆರಳಿಚಿದರೇ ಕುನ್ನಿಗಳಕಟ
ಭರತಸಂತತಿ ಫಲಿತ ಕದಳಿಯ ತೆರದಲಾಯಿತಲ ||
ಕುರುಡನರಿಯದೆಹೋದರೆಯು ಕಂ
ಗುರುಡರಾದರೆ ಭೀಷ್ಮ ವಿದುರಾ
ದ್ಯರು ಮಹಾದೇವೆನುತ ಮುರರಿಪು ತೂಗಿದನು ಶಿರವ ||

**ದ್ರೌಪದಿಯ ವಿಚಾರದಲ್ಲಿ ಹಿಂದೆ ಪರಮೇಶ್ವರನ ಭರತವಾಕ್ಯ**

ನಿನ್ನ ಕಥನವೆ ಪುಣ್ಯಕಥನವು
ನಿನ್ನ ಚರಿತವೆ ಪುಣ್ಯಚರಿತವು
ನಿನ್ನ ನೆನೆವಂಗನೆಗೆ ಬಹುದು ಪತಿವ್ರತಾ ವಿಭವ ||
ಎನ್ನನುಜ್ಞೆಯು ಧರ್ಮಚಿಂತಾ
ಪನ್ನೆಯಾಗದಿರೆಂದು ಕೃಪೆಯಲಿ
ತನ್ನ ಸಿರಿಕರತಳವ ನಿರಿಸಿದನುತ್ತಮಾಂಗದಲಿ ||

---

## ೩. ಕೀಚಕನ ಕಥೆ

ಒಂದು ಪ್ರಸಂಗವನ್ನು ಉತ್ಕೃಷ್ಟವಾಗಿ, ಮನುಷ್ಯ ಸ್ವಭಾವಕ್ಕೆ ಅನುಗುಣವಾಗಿ, ಅನೇಕ ರಸಗಳನ್ನು ಪ್ರದರ್ಶಿಸಿ, ಅತಿ ಸ್ವಾರಸ್ಯವಾಗಿ ಬೆಳಸುವುದರಲ್ಲಿ ಕುಮಾರವ್ಯಾಸನಿಗೆ ಸಮನಾದ ಕವಿ ಕನ್ನಡದಲ್ಲಿ ಬಹುಶಃ ಇನ್ನೊಬ್ಬನಿಲ್ಲ. ಕನ್ನಡ ಭಾರತದ ಯಾವ ಉಪಕಥೆಯನ್ನು ಬೇಕಾದರೂ ನಾವು ಭಾವಿಸಬಹುದು. ಕೀಚಕವೃತ್ತಾಂತದಲ್ಲಿ ಸವಿ ಬಹುಮುಖವಾಗಿದೆ; ಆದ್ದರಿಂದ ಅದನ್ನು ಇಲ್ಲಿ ಸಂಗ್ರಹಿಸಿದೆ. ಅದರಲ್ಲಿ ಧರ್ಮರಾಯ, ಭೀಮ, ಕೀಚಕ, ದ್ರೌಪದಿ—ಇವರೆಲ್ಲರ ಸ್ವಭಾವಗಳು ಬಹು ಚೆನ್ನಾಗಿ ಒಡೆದು ತೋರಿವೆ. ಪಾತ್ರಗಳ ಬೆಳವಣಿಗೆಯ ಕೌತುಕವನ್ನೂ ಕಥೆ ಮುಂದುವರಿಯುವ ಚಾತುರ್ಯವನ್ನೂ ಓದುಗರು ಒಟ್ಟಿಗೆ ಮನನ ಮಾಡಬೇಕು.

ಒಂದು ದಿವಸ ವಿರಾಟನರಸಿಯ
ಮಂದಿರವನೋಲೈಸಲೆಂದೈ
ತಂದನಾಕೆಯ ತಮ್ಮ ಕೀಚಕನತುಳ ಭುಜಬಲನು ||

ಕಂಡನವ ಪಾಂಚಾಲನಂದನೆಯ. ಹೂಗಣೆ ಹೃದಯವನು ಹೂಳಿದುವು; ಹರ ಹರ! ಹೆದರಿದನು ಹಮ್ಮೈಸಿದನು† ಖಳನೊಂದು ನಿಮಿಷದಲಿ. ಬೀಳುಕೊಂಡುದು ಲಜ್ಜೆ; ಮಹಿಮೆಯಕೀಲು ಕಳಚಿತು; ದ್ರುಪದತನುಜೆಯನಾಲಿಯಲಿ ನುಂಗಿದನು. †ಮೈಮರೆದನು.

ಸೂರೆವೋದುದು ಚಿತ್ತ ಕಂಗಳು
ಮಾರುವೋದುವು ಖಳನ ಧೈರ್ಯವು
ತೂರಿಪೋದುದು ಕರಣದಲಿ ಕಳವಳದ ಬೀಡಾಯ್ತು ||

ಅರಿವು ತಲೆಕೆಳಗಾಯ್ತು; ಕರಿಮೊಳೆಯಾಯ್ತು ಭಯಬೀಜ. ಒಲಿದು ಸಿಂಹದ ಸತಿಗೆ ನರಿ ಮನವಳುಪುವಂತಿರೆ, ಕಣ್ಣರಿಗಾದಿ ಇವಳಾರೆನುತ ಗಜಬಜಿಸಿದನು ನಿಮಿಷದಲಿ.

ಖಳನ ಮನದಿಂಗಿತವ ತನ್ನೊಳು
ತಿಳಿದು ಕಾಮಿನಿ ಬೆದರಿದಳು ಕಳ
ವಳಿಗ† ಸೋತನು ಕೆಟ್ಟೆನೆಂದಳು ತನ್ನ ಮನದೊಳಗೆ ||†ಚಪಲಿಗ
ತೊಲಗಿ ಹಿಂದಡಿಯಿಡಲು ಕೀಚಕ
ನಳುಕದೈತಂದಬುಜವದನೆಯ
ಬಳಿಗೆ ಬಂದನು ನುಡಿಸಲಾಗದೆ ತರಳೆ ನೀನೆಂದ ||

ಎಲೆ ದುರಾತ್ಮ ಮಹಾಪರಾಧವ
ಬಳಸುವರೆ ಬಯಲಿಂಗೆ ನಿನ್ನಯ
ಕುಲದ ಬೇರನು ಕೊಯ್ವರೇ ಫಲವಾವುದಿದರಿಂದ ||

ಎಲೆಗೆ ಪಾತಕಿ ನಿನ್ನ ಕಣ್ಣೆಂ
ಬಲಗಿನಲಿ ಯೆನ್ನೆದೆಯ ನೋಯಿಸಿ
ತೊಲಗಬಹುದೇ ಕರುಣವಿಲ್ಲವೆ ನಿನ್ನ ಮನದೊಳಗೆ ||

ಪರರ ಸತಿಗಳುಪಿದರೆ ಪಾತಕ
ದೊರಕುವುದು ಜಯಲಕ್ಷ್ಮಿ ಸಡಿವಳು
ಧರೆಯೊಳಗ್ಗದ ಕೀರ್ತಿ ಮಾಸುಗು ಗತಿಗೆ ಕೇಡಹುದು ||

ಮೇಲೆ ಸದ್ಗತಿ ಬೆಂದುಹೋಗಲಿ
ಕಾಲನವರೈತರಲಿ ಬಂಧುಗ
ಳೇಳಿಸಲಿ ಯೆನ್ನವರು ತೊಲಗಲಿ ರಾಣಿಯರು ಬಿಡಲಿ ||

ಬಾಲೆ ನಿನಗಾನೊಲಿದೆ; ಲೋಲಲೋಚನೆ! ಬಿರುಬ ನುಡಿಯದೆ ತನ್ನನುಳುಹೆಂದ. ಮರುಳೆ, ದಳ್ಳುರಿಯ ಪ್ರತಿಮೆಯ

ನಪ್ಪುವರೆ? ಬಯಸಿ ಗರಳಕಂಗೈಸುವರೆ† ? ಪಾಪಿಯೆ, ಮರಳು ನಿನ್ನರಮನೆಗೆ! ಎನ್ನಯ ಗರುವಗಂಡರು ಕಡಿದು ಹರಹುವರೆಂದಳಿಂದುಮುಖಿ. †ಆಶಿಪಡುವರೆ

ಬುದ್ಧಿ ಕವಡಿ ಕೃಪಾಣಪಾಣಿ ವಿರಾಟರಾಜನ ರಾಣಿಯರ ಮನೆಗೈದಿದನು. ಕಂಡನು ನಿಜಾಗ್ರಜೆಯ.

ಆವಳ ತೊಡಕೇ ಬೇಡ ಸತಿಯರ
ನಿವಹವಲಿ ನೀನಾರ ಬಯಸಿಹೊ
ಡವಳ ನಾ ಮುಂದಿಟ್ಟು ಮದುವೆಯ ನೊಲಿದು ಮಾಡುವೆನು ||

ಅಕ್ಕ ಮರುಳೌ ಚಿತ್ತವವಳಲಿ
ಸಿಕ್ಕಿ ಬೇರ್ವರಿಯಿತ್ತು ಬರಿದೇ
ಮಿಕ್ಕ ಡಿಂಭಕೆ ಮದುವೆಯುಂಟೇ ಮನವ ಬೇರಿರಿಸಿ ||
ಮಕ್ಕಳಾಟಿಕೆ ಯಾದರಾಗಲಿ
ತಕ್ಕರಲ್ಲೆಂದೆನಲಿ ಸಲಹುವೊ
ಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ ||

ಅನುಜನಾರೆಂದರಿಯೆ ಸಾಕಾ
ತನ ಸಮೀಪಕೆ ಹೋಗಿ ಬಾ ನಡೆ
ಯೆನಲು ಕೈಕೊಂಡಬಲೆ ಹೊರವಂಟಳು ನೃಪಾಲಯವ ||

ಹರಿ ಹರಿ ಶ್ರೀಕಾಂತ ದಾನವ
ಹರ ಮುಕುಂದ ಮುರಾರಿ ಗತಿಶೂ * ಮರ್ಯಾದೆಗೆಟ್ಟ
ನ್ಯರಿಗೆ ನೀನೇ ಗತಿಯಲಾ ಗರುವಾಯಿಗೆಟ್ಟ*ನೆಲ್ಲೈ ||
ಕುರುಕುಲಾಗ್ರಣಿ ಸೆಳೆದ ವಸ್ತ್ರ
ಕರುಷಣದ ಭಯ ಮತ್ತೆ ಬಂದಿದೆ
ಕರುಣಿ ನೀನೇ ಬಲ್ಲೆ ಯೆನುತಡಿಯಿಟ್ಟಳಬುಜಾಕ್ಷಿ ||

ಕಡು ಚೆಲುವೆ ಬರಲವನು ತನು ನಡು
ನಡುಗಿ ನಿಂದನದಾವ ಹೆಂಗುಸು
ಪಡೆದಳೀ ಚೆಲುವಿಕೆಯ ನೆನುತಡಿಗಡಿಗೆ ಬೆರಗಾದ ||

ತರುಣಿ ಬಾ ಕುಳ್ಳಿರು ಮದಂತಃ
ಕರಣದೆಡರಡಗಿದುದು ಕಾಮನ
ದುರುಳತನಕಾನಂಜುವೆನೆ ನೀನೆನಗೆ ಬಲವಾಗೆ ||

ಬಾಯಿ ಹುಳುವುದು ಬಯಲ ನುಡಿದೊಡೆ
ನಾಯಿತನ ಬೇಡೆಲವೊ ಕೀಚಕ
ರಾಯನಂಗನೆ ಕಳುಹೆ ಬಂದೆನು ಮಧುವ ತರಲೆಂದು
ಸಾಯಬೇಕೇ ಹಸಿದ ಶೂಲವ
ಹಾಯಿ ಹೋಗೆನೆ ನಿನ್ನ ಬೈಗಳು
ನೋಯಿಸುವುವೇ ತನ್ನನೆನುತವೆ ಪಿಡಿದನಾ ಕರವ ||

ಕರವನೊಡೆ ಮುರುಚಿದಳು ಬಟ್ಟಲ
ಧರೆಯೊಳೀಡಾಡಿದಳು ಸತಿ ಮೊಗ
ದಿರುಹಿ ಬಾಗಿಲ ದಾಂಟಿದಳು ಭಯದಲಿ ನಡುಗಿ ಡೆಂಡಣಿಸಿ†||

† ತತ್ತರಿಸಿ

ಒಡನೆ ಬೆಂಬತ್ತಿದನು ತುರುಬನು
ಹಿಡಿದು ತೊತ್ತಿನ ಮಗಳೆ ಹಾಯ್ದೊಡೆ
ಬಿಡುವೆನೇ ಫಡಯೆನುತ ಹೊಯ್ದನು ಕಾಲೊಳೊಡೆಮೆಟ್ಟಿ ||

ನುಡಿಯಲಾಗದೆ ಖಳನು ಹೆಂಗುಸ
ಬಡಿಯೆ ನೋಡುತ್ತಿಹರೆ ಹಿರಿಯರು
ಹಿಡಿದ ಮೌನದ ಹೊತ್ತು ಲೇಸೆಂದಬಲೆ ಯೊರಲಿದಳು ||

ಎಲವೊ ದೇಸಿಗ* ಕಂಕಭಟ್ಟನೆ *ಬಡವ, ಭಿಕ್ಷುಕ
ಹಲವು ಧರ್ಮವ ಬಲ್ಲೆ ಗಡ ನೃಪ ।
ತಿಲಕಗರುಹುವುದೇನು ಸನ್ಯಾಸಿಗಳಿಗುಚಿತವಿದು ॥
ತಿಳಿಯೆ ದೇಸಿಗರಿಂಗೆ ದೇಸಿಗ
ರೊಲವು ಸಮನಿಸಬೇಕು ಸಭೆಯಲಿ
ಬಲವಿಹೀನರಿಗಾಪ್ತರಿಲ್ಲೆಂದಬಲೆ ಯೊರಲಿದಳು ॥

ನೊಂದಳಕಟಾ ಸತಿಯೆನುತ ಮನ
ನೊಂದು ಮೋರೆಯ ಬಲಿದು ಖತಿಯಲಿ
ಕಂದಿ ನಸು ವೈಬಾಗಿ ರೋಷದೊಳಾಡನೊಡೆಯೊತ್ತಿ ॥
ಮಂದಿಯರಿಯದವೋಲು ಚೇಷ್ಟೆಯೊ
ಳೊಂದಿ ಮೆಲ್ಲನೆ ಬಾಗಿ ನೋಡಿದ
ನಂದು ರಾಜಾಲಯದ ಮುಂದಣ ಮರನನಾ ಭೀಮ ॥

ಧರ್ಮಮಯ ತರುವಿದನು ಮುರಿಯದಿ
ರೆಮ್ಮ ನುಡಿಗಳ ಕೇಳಿನಲು ಮಿಗೆ
ಸುಮ್ಮನೋಲಗದಿಂದ ಸರಿದನು ಭೀಮ ದುಗುಡದಲಿ ॥
ಕರ್ಮಫಲವಿದು ನಿನಗೆ ಕಾಮಿನಿ
ನಿಮ್ಮ ಭವನಕೆ ಹೋಗು ಶಿಕ್ಷಿಸ
ಲಮ್ಮದೀ ಸಭೆ ಬಗೆಯನಾತನು ಮತ್ಸ್ಯಭೂಪತಿಯ ॥

ನೀರು ಹೊರಗಿಕ್ಕುವುದು ಮೂರೇ
ಬಾರಿ ಬಳಿಕದು ಪಾಪಿ ಝಾಡಿಸೆ
ಸೈರಿಸದು ಅನ್ಯಾಯ ಬಹುಳತೆಗೇನಮಾಡುವುದು ॥
ಸೈರಣೆಗೆ ತಾನವಧಿಯಿಲ್ಲಾ
ಪೌರುಷದ ಬಗೆ ಬಂಜೆಯಾಯಿತು
ಆರಯಿಕೆಯಲಿ ಜುಣುಗಿ ಜಾರುವಿರೆಂದಳಿಂದುಮುಖಿ ॥

ಆರರೆ ಹೆಂಗುಸು ದಿಟ್ಟೆ ಮೌನವೊ
ಳಿರಲಿದಾವಂತರವು ರಾಯನ † ಮರ್‍ಯಾದೆ
ಹೊರೆಯಲೀ ಬಾಯ್ಬಡಿಕತನ ಗರುವಾಯಿ†ಯೇ ಯೆನಲು ||

ಕೆರಳಿದಳು; ಇಲ್ಲಿಯ ಹಿರಿಯರಲಿ ಹುರುಳಿಲ್ಲ ಯೆನುತ ತಿರುಗಿದಳು.

ಯಮಸುತಂಗರುಹುವೆನೆ ಧರ್ಮದ
ಕ್ಷಮೆಯ ಗರ* ಹೊಡೆದಿಹುದು ಪಾರ್ಥನು *ಗ್ರಹ
ಮಮತೆಯುಳ್ಳವನೆಂಬೆನೇ ತಮ್ಮಣ್ಣನಾಜ್ಞೆಯಲಿ ||
ಭ್ರಮಿತನಾಗಿಹ ನುಳಿದರಿಬ್ಬರು
ರಮಣರವರೀ ನಾಯ ಕೊಲಲ
ಕ್ಷಮರು ನಿಸ್ಸಂದೇಹವೆಂದಳು ತನ್ನ ಮನದೊಳಗೆ ||

ಎಲ್ಲರೊಳು ಕಲಿಭೀಮನೇ ಮಿಡು
ಕುಳ್ಳ ಗಂಡನು ಹಾನಿಹರಿಬಕೆ
ನಿಲ್ಲದಂಗೈಸುವನು ಕಡುಹೀಹಾಳಿಯುಳ್ಳವನು* ||
ಖುಲ್ಲನಿವನುಪಟಳವ ನಾತಂ * ಅನ್ಯಾಯ ಸಹಿಸದವನು.
ಗೆಲ್ಲವನು ತಿಳುಹುವೆನು ಬಳಿಕವ
ನಲ್ಲಿ ಹುರುಳಿಲ್ಲದೊಡೆ ಕುಡಿವೆನು ಘೋರತರವಿಷವ ||

ಕಳವಳದ ಕರಣದಲಬಲೆ ಬಂದಳು ಬಾಣಸಿನ ಮನೆಗೆ.

ಆರಲಂದನೊ ಭೀಮಸೀ ಸೂ
ದಾರವಿದ್ಯೆ*ಯ ಭಾಪು ವಿಧಿ ಮುನಿ *ಅಡುಗೆವಿದ್ಯೆ
ದಾರನಾವಂಗದಲಿ ಬರಿಸದು ಶಿವಶಿವಾಯೆನುತ ||

ನಾರಿ ನಸುನಗುತೊಳಗೆ ಹೊಕ್ಕು ಬ
ಕಾರಿ ಮಂಚದಲಿರಲು ನಿದ್ರಾ
ಭಾರವಿಹ್ವಲ ಕರಣನನು ಹೊದ್ದಿದಳು* ದುಗುಡದಲಿ ||*ಸೇರಿದಳು.

ಎಬ್ಬಿಸಲು ಭುಗಿಲೆಂಬನೋ ಮೇ
ಣೊಬ್ಬಳೀತಕೆ ಬಂದೆ ಮೋರೆಯ
ಮುಬ್ಬಿದೇನೆಂದೆನ್ನ ಸಂತೈಸುವನೊ ಸಾಮುದಲಿ ||
ತುಬ್ಬುವುದೊ* ತಾ ಬಂದ ಬರವಿದು *ಪತ್ತೆಯಾಗುವುದೊ
ನಿಬ್ಬರವಲಾ ಜನದ ಮನಕಿ
ನ್ನೆಬ್ಬಿಸಿಯೆ ನೋಡುವೆನೆನುತ ಸಾರಿದಳು ವಲ್ಲಭನ ||

ಆಪ್ರತಿಮಲ್ಲನೆದ್ದನು, ನೋಡಿದನು ಪಾಂಚಾಲನಂದನೆಯ.

ಉಸುರಲಾಗದು ನಿನ್ನ ಹರಿಬಕೆ
ಮಿಸುಕುವವರಾವಲ್ಲ ಹೆಂಡಿರ
ಗಸಣಿ* ಗೊಂಬವರಲ್ಲ ಹುದುವಿನ† ಗಂಡತನವಿದನು ||

*ತಂಟೆ †(ಐವರಿಗೂ) ಸೇರಿದ.

ಶಶಿವದನೆ ಸುಡು ಕಷ್ಟವೀಯುಪ
ದೆಸೆಯವರು ನಾವಲ್ಲ ನಿನ್ನವ
ರಸಮಸಾಹಸರುಳಿದ ನಾಲ್ವರಿಗರುಹು ಹೋಗೆಂದ ||

ಗೆದ್ದುಕೊಡುವರು ನಿನ್ನ ಪಾಲಿಸ
ದಿದ್ದರಾದರೆ ದೋಷವವರನು
ಹೊದ್ದುವುದು ನೀನಿನ್ನು ಬರಿದೇ ಕಾಡಬೇಡೆಂದ ||

ಗಂಡರೈವರು ಮೂರುಲೋಕದ
ಗಂಡರೊಬ್ಬಳ ನಾಳಲಾರಿರಿ
ಗಂಡರೋ ನೀವ್ ಷಂಡರೋ! ಹೇಳೆಂದಳಿಂದುಮುಖಿ ||

ಅಂದು ಮೇಲಿಂದಾದ ಭಂಗಕೆ
ಬಂದುದಾವುದು ನೀವು ಬಲ್ಲಿದ
ರೆಂದು ಹೊಕ್ಕರೆ ಹೆಣ್ಣ ಕೊಂದಿರಿ ಯೆಂದಳಿಂದುಮುಖಿ ||

ನೊಂದು ನುಡಿದರೆ ಖಾತಿಯಿಲ್ಲೆನಗೆ ;

ಈ ನಪುಂಸಕರೊಡನೆ ಹುಟ್ಟಿದ
ನಾನು ಮೂಗುಳ್ಳವನೆ ಮಾನಿನಿ
ನೀನು ತೋರಿದ ಪರಿಯಲೆಂಬುದು ಭೀತಿ ಬೇಡೆಂದ ||

ಅಂದು ದುಶ್ಶಾಸನನ ಕರುಳನು
ತಿಂದೊಡಲ್ಲದೆ ತಣಿವು ದೊರೆಕೊಳ
ದೆಂದು ಹಾಯ್ದರೆ ಹಲುಗಿರಿದು ಮಾಣಿಸಿದನಾ ವ್ಯಥೆಯ ||
ಇಂದು ಕೀಚಕನಾಯನೆರಗುವೆ
ನೆಂದು ಮರನನು ನೋಡಿದರೆ ಜೇ
ಡೆಂದ ಹದನನು ಕಂಡೆ ಯಿನ್ನೆನಗುಂಟೆ ಮುಪವಾದ ||

ಅಣ್ಣನವರಿಗೆ ದೂರುವುದು, ನಾವುಣ್ಣದುರಿಯಿವು. ಎಮ್ಮಯ ದಂಡಿ ತಾನದು ಬೇರೆ. ನಾವೀ ಭಂಡತನದಲಿ ಬದುಕಲರಿಯೆವು; ಧರ್ಮನಿರ್ಮವನು ಕೊಂಡು ಕೊನರುವರಲ್ಲ.

ತರುಣಿ ಸೀ ಕೇಳಿಂದು ಮೊದಲಾ
ಗರಸಿ ನೀ ನಾಲ್ವರಿಗೆ ಸಾವೆಡೆ
ಮುರಿದವರು ಬಿಟ್ಟವರು ನಿನ್ನಯ ಸೂಳುಪಾಳೆಯವ* ||

*ಸರದಿ ಒಕ್ಕಲು

ಕೇಳುತಿದ್ದಳು ಕೊರಳ ಸೆರೆ ಗೋ
ನಾಳಿಗೌಕಿತು ಬಿಕ್ಕಿ ಬಿಕ್ಕಿ ವಿ
ಶಾಲಲೋಚನೆ ಯಕಟ ನನೆದಳು ಬಾಷ್ಪವಾರಿಯಲಿ ||

ಶೂಲ ಮರುಮೊನೆಗೊಂಡವೊಲು ಸುಳಿ
ವಾಳ ಝುಳತಾಗಿದವೊಲುದರ
ಜ್ವಾಲೆ ನೆತ್ತಿಗೆ ನಿಲುಕೆ ಮಿಡುಕಿದಳಬಲೆ ಬಿಸುಸುಯ್ದು ||

ಇನ್ನು ಹುಟ್ಟದಿರಲಿ ನಾರಿಯ
ರೆನ್ನವೊಲು ಭಂಗಿತರು ಭುವನದೊ
ಳಿನ್ನು ಜನಿಸಲು ಬೇಡ ಗಂಡರು ಭೀಮಸನ್ನಿಭರು ||
ಎನ್ನವೊಲು ಪಾಂಡವರವೊಲು ಸಂ
ಪನ್ನ ದುಃಖದೊಳಾರು ನವೆದರು
ಮುನ್ನಿನವರೊಳಗೆಂದು ದ್ರೌಪದಿ ಹಿರಿದು ಹಲುಬಿದಳು ||

ಜನನವೇ ಪಾಂಚಾಲರಾಯನ
ಮನೆ ಮನೋವಲ್ಲಭರದಾರೆನೆ
ಮನುಜ ಗಿನುಜರು ಗಣ್ಯವೇ ಗೀರ್ವಾಣರಿಂ ಮಿಗಿಲು ||
ಎನಗೆ ಬಂದೆಡರೀ ವಿರಾಟನ
ವನಿತೆಯರುಗಳ ಮುಡಿಯ ಕಟ್ಟುವ
ತನುವ ತಿಗುರುವ* ಕಾಲನೊತ್ತುವ ಕೆಲಸದುತ್ಸಾಹ ||

*ಗಂಧಹಚ್ಚುವ

ಹಗೆಗಳಿಗೆ ತಂಪಾಗಿ ಬದುಕುವ
ಮುಗುದರಿನ್ನಾರುಂಟು ಭಂಗಕೆ
ಹೆಗಲ ಕೊಟ್ಟಾನುವ ವಿರೋಧಿಗಳುಂಟೆ ಲೋಕದಲಿ ||
ವಿಗಡ ಬಿರುದನು ಬಿಟ್ಟು ಬಡಹೋ
ರಿಗಳು ಪಾಂಡವರಂತೆ ಮೂಗು
ಚ್ಚಿಗಳದಾರುಂಟೆಂದು ಮರುಗಿದಳು ನಳಿನಾಕ್ಷಿ ||

ಕಾಲಯಮ ಕೆರಳಿದರೆ ಮುರಿವೆ
ಚಾಳುತನ*ದವರೆನ್ನನೊಬ್ಬಳ *ಶೌರ್ಯ
ನಾಳಲರಿರಿ ಪಾಪಿಗಳಿರಪಕೀರ್ತಿಗಳುಕಿರಲ ||
ತೋಳಹೊರೆ ನಿಮಗೇಕೆ ಭೂಮಿಪಾ
ಪಾಲವಂಶದೊಳುದಿಸಲೇತಕೆ
ಕೂಳುಗೇಡಿಂಗೊಡಲ ಹೊರುವಿರಿ ಯೆಂದಳಿಂದುಮುಖಿ ||
ನೀವು ತಟತಟವಾಗಿ* ಲೋಗರ *ಮತ್ತೆಮತ್ತೆ ?
ಸೇವೆಯಲಿ ಬೆಂದೊಡಲ ಹೊರುವಿರಿ
ಸಾವವಳು ನಿಮಗಂಜಲೇಕೆಂದಬಲೆ ಯೊರಲಿದಳು ||
ಭೀಮ ಕೊಟ್ಟೈ ತನಗೆ ಸಾವಿನ
ನೇಮವನು ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ಬದುಕಿ ಧರ್ಮದ ವ್ಯೈಸಿರಿಯನರಿದು ||
ಕಾಮಿನಿಯ ಕೇಳಿಯಲಿ ನೆನೆವುದು
ತಾಮಸದಿ ತಾ ಮೀರಿ ನುಡಿದು
ದ್ದಾಮತೆಯ ಸೈರಿಸುವುದೆಂದೆರಗಿದಳು ಚರಣದಲಿ ||
ಎನಲು ಕಂಬನಿದುಂಬಿದನು ಕಡು
ನನೆದುದಂತಃಕರಣ ರೋಷದ
ಘನತೆ ಹೆಚ್ಚಿತು ಹಿಂಡಿದನು ಹಗೆಗಳನು ಮನದೊಳಗೆ ||
ತನು ಪುಳಕ ವುಬ್ಬರಿಸೆ ದಿಮ್ಮನೆ
ವನಿತೆಯನು ತೆಗೆದಪ್ಪಿದನು ಕಂ
ಬನಿಯ ತೊಡೆದನು ಸೆರಗಿನಲಿ ಕಲಿಭೀಮ ಮಾನಿನಿಯ ||
ಅರಸಿ ಬಿಡು ಬಿಡು ಖಾತಿಯನು ವಿ
ಸ್ತರಿಸಲೇಕಿನ್ನಣ್ಣ ನಾಜ್ಞೆಯ
ಗೆರೆಯ ದಾಂಟದೆ ದಾಂಟದೆನು ಹೋಗೆಂದನಾ ಭೀಮ ||

ಬಸುರ ಬಗಿವೆನು ಕೀಚಕನ ನಸು
ಮಿಸುಕಿದರೆ ವೈರಾಟ ವಂಶದ
ಹೆಸರ ತೊಡೆವೆನು ನಮ್ಮನರಿದೊಡೆ ಕೌರವವ್ರಜವ ||
ಕುಸುರಿದರಿವೆನು ಭೀಮ ಕಷ್ಟವ
ನೆಸಗಿದನು ಹಾಯೆಂದರಾದೊಡೆ
ಮುಸುಡನಮರಾದ್ರಿಯಲಿ ತೇವೆನು ದೇವಸಂತತಿಯ ||

ಹಿರಿದು ಮುನಿದರೆ ಭೀಮ ಬಗೆವನೆ ನೀತಿಗೀತಿಗಳ!

ಕೆರಳಿಚಿದೆ ಯಿನ್ನೇನು ನಿನ್ನಯ
ಹರಿಬವೆನ್ನದು ನಾಯಿಜಾರನ
ಕರೆದು ಸಂಕೇತದಲಿ ಸೂಚಿಸು ನಾಟ್ಯಮಂಟಪವ ||

ಹರುಷದಲಿ ಹೆಚ್ಚಿದಳು ಪುರುಷರ
ಪುರುಷನಲ್ಲಾ ಭೀಮ ತನ್ನಯ
ಪರಮ ಸುಕೃತೋದಯವಲಾ ನೀನೊಬ್ಬನೆಂದೆನುತ ||
ಅರಸಿ ಕಾಂತನ ಬೀಳುಕೊಂಡಳು.

ಅಳುಪಿ* ಮನದಲಿ ಖೂಳ ಕಮಲಾನನೆಗೆ ಕೈಮುಗಿದ.
*ಆಸೆಪಟ್ಟು

ಅರಿದರಾದರೆ ನಿನ್ನ ವಂಶವ
ತರಿವರೆನ್ನವ ರೆಲವೊ ಕೆಲಬಲ* *ಅಕ್ಕಪಕ್ಕ
ನರಿಯುವಂತಿರೆ ಬಂದು ನಾಟ್ಯದ ಗರುಡಿಯೊಳಗಿಹುದು ||
ನೆರೆದುದಾಯುಷ ನಿನಗೆ ಕತ್ತಲೆ
ಮರೆಯೊಳಾನೈ ತಹೆನು.

ಅಂದಖಿಳ ಸಾಮ್ರಾಜ್ಯವಿದಿರ್ದೈತಂದವೊಲು ಉರಿಯ ಮಾರಿಯ ಬೇಟ*ದಾ ಖಳ ಹಿಗ್ಗಿದನು. *ಪ್ರಣಯ

ಕಾಲಪಾಶದಲೆಳಸಿಕೊಂಬ ಕ
ರಾಳಮತಿ ಸುಡುಗಾಡಲೈತಂ
ದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ ||
ಮೇಲೆಮೇಲವಶಕುನ ಶತಕವ
ನಾಲಿಸದೆ ಸುಷ್ಮ್ನಾನದಲಿ ಕೇ
ಡಾಳಿ ಬಂದನು ಮಂಚವಿದ್ದೆಡೆಗಾಗಿ ತಡವರಿಸಿ ||

ಎನ್ನವೊಲು ಪುರುಷರಲಿ ಚೆಲುವರ
ಮುನ್ನ ನೀ ಕಂಡರಿದೆಯಾದೊಡೆ
ಯೆನ್ನ ಮೇಲಾಣೆಲಗೆ ಹುಸಿಯದೆ ಹೇಳು ಹೇಳೆಂದು ||
ಮುನ್ನ ನಿನ್ನಿಂದಧಿಕದಬಲೆಯ
ರೆನ್ನನೇ ಬಯಸುವರು ನಾರಿಯ
ರೆನ್ನ ಕಂಡರೆ ಸೋಲದವರಿಲ್ಲೆಲಗೆ ನಿನ್ನಾಣೆ ||

ಎಲವೊ ಕೀಚಕ ನಿನ್ನ ಹೋಲುವ
ಚೆಲುವರಿಲ್ಲಂತಿರಲಿ ಲೋಕದ
ಲಲನೆಯರ ಪರಿಯಲ್ಲ ತನ್ನಯ ರೂಪು ಬೇರೊಂದು ||

ಎನಗೆ ಪುರುಷರು ಸೋಲದವರಿ
ಲ್ಲೆನಗೆ ಪಾಸಟಿ ನೀನು ನಿನಗಾಂ
ಮನವೊಲಿದೆ ನೀ ನೋಡು ಯೆನ್ನಯ ಹೆಣ್ಣುತನದನುವ ||
ಎನಲು ಹರುಷದಲುಬ್ಬಿ ಕೀಚಕ
ನನಿಲಜನ ವೈದಡವಿ* ಭುಜದ ಕ
ಠಿನವ ಕಂಡು ಹೆದರಿದ* ಬಳಿಕಿಂತೆಂದನವ ನಗುತ ||

---

* ಈ ಪಾಠಾಂತರ ನನ್ನದು.

ಎಲೆಗೆ ಕಲುವ್ಮೈಯಾದೆ ಕಡು ಕೋ
ಮಲತೆ ಯೆತ್ತಲು ಕರ್ಕಶಾಂಗದ
ಬಲುಹಿದೆತ್ತಲು ಮಾಯವೇಷವ ಧರಿಸಿದೆಯೊ ಮೇಣು ||
ತಿಳುಹೆನಲು ಕೇಳಿಲವೊ ಪರಸತಿ
ಗಳುಪಿದಾತ್ಮಂಗವ್ಮೃತ ವಿಷ ಕೋ
ಮಲತೆ ಕರ್ಕಶವಹುದೆನುತ ತುಡುಕಿವನು ಮುಂದಲೆಯು ||

ಬರಸಿಡಿಲು ಪರ್ವತದ ಶಿಖರವ
ನೆರಗುವಂತಿರೆ ಖಳನ ನೆತ್ತಿಯು
ನೆರಗಿದನು ರಣಧೀರನುನ್ನತ ಬಾಹುಸತ್ವದಲಿ ||

ಎದೆ ಜರ್ಝರಿತವಾಯಿತು ಕಾರಿದನು ಕರುಳ ;

ಬಿರಿದುವಾಲಿಗಳೊಲೆದೊಲೆದು ಕಂ
ಣ್ತೆರುಗಿ ಧೊಪ್ಪನೆ ಕೆಡೆದು ನಿಮಿಷಕೆ
ಹೊರಳಿ ಹರಣವ ಕಳುಹಿ ಕಳೆದುದು ಕಾಯ ಕೀಚಕನ ||

ತಲೆಯ ನೆದೆಯೊಳಗಿಕ್ಕಿ ಕೈ ಕಾ
ಲ್ಗಳನು ಬಸುರೊಳು ಸೆಕ್ಕಿ ದೂರಕೆ
ತೊಲಗಿದನು ತೋರಿದನು ತರುಣಿಗೆ ಕೀಚಕನ ಹವನ||
ಖಳನು ಕಾಲನ ಕೋಣ ತುಳಿದಂ
ತಿಳೆಯೊಳೊರಗಿರೆ ಕಂಡು ಕಾಮಿನಿ
ಕಳಕಳಿಸಿ ನಗುತಾಗ ತಕ್ಕೈಸಿದಳು ವಲ್ಲಭನ ||

ಪವನಜ ಸರಿದನತ್ತಲು; ಹೊಟ್ಟೆಯೊಳುರಿ ಚಡಾಳಿಸೆ*
ಬಿಟ್ಟ ಮಂಡೆಯೊಳಿರದೆ ಬಂದರು ಕೀಚಕನ ಸೋದರರು
ಬಾಯ್ಬಿಡುತ. * ಹೆಚ್ಚಲು

ಕ್ರೂರ ಕರ್ಮರು ನಿನ್ನ ಕೊಂದವ
ರಾರು ಹಾಹಾ ಯೆನುತ ಹಲುಬಲು
ವಾರಿಜಾನನೆ ಮುಗುಳುನಗೆಯಲಿ ನೋಡಿದಳು ಖಳರ ||

ತೆಗೆದು ಮಂಚದಲವನ ಹೆಣನನು
ಬಿಗಿದು ಆತನ ಕಾಲ ದೆಸೆಯಲಿ
ನಗುವುದಿನ್ನೊಮ್ಮೆನುತ ಕಟ್ಟಿದರವರು ಕೋಮಲೆಯ ||
ಜೆಗಡುಗೊಂಡಂಭೋಜಮುಖಿಯು
ಬೈಗದೊಳೊರಲಿದ ಳಕಟಕಟ ಪಾ
ಪಿಗಳಿರಾ ಗಂಧರ್ವರಿರ ಹಾಯೆನುತ ಹಲುಬಿದಳು ||

ಕೇಳಿದನು ಕಲಿ ಭೀಮ ಸತಿಯಾಕ್ರಂದನ* ಧ್ವನಿಯ ; ಫಡ ಯೆನುತ ಕೊಂಡನು ಮುರಿದು ಹೆಮ್ಮರನ. ದೆಸೆದೆಸೆ ಗೊರಲಿ ಚಿಮ್ಮುವ ಚಪಳರನು ಬೆಂಬತ್ತಿ ಬರಿಕೈದು ಕುರಿದರಿಯ ಮಾಡಿ ದನು, ನೂರೈವರನು ಕೊಂದನು, ಸತಿಯ ಬಿಡಿಸಿಯೆ ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸಿನ ಮನೆಯ. *ಅಳು

ಸುಳಿಯಲಮ್ಮದು ಪೌರಜನ ವಿವ
ರಳಿವ ವಚನಿಸಲಮ್ಮದೀಕೆಯ
ನಲುಕ*ಲಮ್ಮದು ನೋಡಲಮ್ಮದು ಮಂದಿ ಗುಜುಗುಜಿಸಿ ||
*ಕೆಣಕು

ನಳಿನಮುಖಿ ನಸುನಗುತ ತಿಳಿಗೊಳ
ದೊಳಗೆ ಹೊಕ್ಕಳು ಮಿಂದು ಬೀದಿ
ಗಳೊಳಗೆ ಬರುತಿರೆ ಕಂಡು ಕೈಗಳ ಮುಗಿದರಲ್ಲಲ್ಲಿ ||

# ೪. ಉತ್ತರನ ಪೌರುಷ

ಈ ಅಧ್ಯಾಯ ಕುಮಾರವ್ಯಾಸನ ನಾನಾ ಶಕ್ತಿಗಳಿಗೆ ಒಂದು ಕನ್ನಡಿ. ಕಥೆ ಹೇಳುವುದರಲ್ಲಿ ಅವನ ದಕ್ಷತೆ; ಪಾತ್ರಸೃಷ್ಟಿಯಲ್ಲಿ ಅವನ ಅಸಾಧಾರಣ ತಿಳಿವಳಿಕೆ; ವ್ಯಕ್ತಿಗಳ ಸಂಭಾಷಣೆಯನ್ನು ಬರೆಯುವುದರಲ್ಲಿ ಅವನ ಸೂಕ್ಷ್ಮಬುದ್ಧಿ; ತರತರದ ಅಭಿಪ್ರಾಯಗಳನ್ನು ಹೊರಸೂಸುವ ಅವನ ಕಲ್ಪನಾಶಕ್ತಿ; ಅವನ ಪರಿಹಾಸ ಪ್ರವೃತ್ತಿ; ಎಲ್ಲವನ್ನೂ ಇಲ್ಲಿ ಭಾವಿಸಬಹುದು. ಉತ್ತರನ ಪಾತ್ರವನ್ನು ಸಮಗ್ರವಾಗಿ ನಿರ್ಮಿಸಿರುವನು ಅವನೊಬ್ಬನೇ. ಉತ್ತರನಿಗೆ ಭೂಮಿಂಜಯನೆಂದು ಹೆಸರು; ಅವನು ವಿರಾಟನ ಎರಡನೇ ಹೆಂಡತಿಯಾದ ಸುದೇಷ್ಣೆಯ ಒಬ್ಬನೇ ಮಗ; ತಾಯಿಯ ಕಣ್ಣೆದುರಿಗೇ ಬೆಳೆದ ಮುದ್ದು ಮಗ. ಕೋಟೆಯ ಹೊರಗಡೆ ಹೋಗಿ ನೋಡಿದವನಲ್ಲ. ಸೈನ್ಯವೆಂದರೇನು? ಕಾಳಗದ ರೀತಿಯಾವುದು? ಒಂದೂ ಅವನಿಗೆ ಗೊತ್ತಿಲ್ಲ. ಅದ್ದರಿಂದಲೇ ಅವನು ಮೊದಲು ಜಂಬ ಕೊಚ್ಚುತ್ತಾನೆ. ಶತ್ರುಸೇನೆ ಇದಿರಾದಾಗ ಅವನಿಗೆ ಅತ್ಯಂತ ಪ್ರಾಣಭೀತಿ ಹುಟ್ಟುತ್ತದೆ; ಆಗ ಅವನಿಗೆ ಒಂದೇ ತೀವ್ರ ಅಭಿಲಾಷೆ: ಹೇಗಾದರೂ ಮಾಡಿ ಜೀವವನ್ನು ಉಳಿಸಿಕೊಳ್ಳುವುದು. ಆದರಿಂದ ಆಗ ಅವನಲ್ಲಿ ಒಂದು ಬಗೆಯ ಬುದ್ಧಿ ವಿಕಾಸವಾಗಿ ಅವನು ವಾಚಾಳಿಯೂ ಉಪಾಯಗಾರನೂ ವಾದನಿಪುಣನೂ ಆಗುತ್ತಾನೆ. ಕುಮಾರವ್ಯಾಸನ ಈ ಚಿತ್ರ ಬಹು ಮನೋಹರವಾದುದು.

ಗೋಪರ ಸಾಲ ಹೊಯ್ದರು ಕರ್ಣ ದುಶ್ಶಾಸನ ಜಯದ್ರಥರು. ಗೋಪಾಲನೊಬ್ಬನ ಹಿಡಿದು ಮೂಗಿನಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ.

ಬಿರುದರನು ಬರಹೇಳು ಹೋಗೆನೆ<br>
ಕರದ ಬಿಲ್ಲನು ಬಿಸುಟು ಬದುಕಿದ<br>
ಶಿರವ ತಡವುತ ಗೋವನೊಬ್ಬನು ಪುರಕೆ ಹರಿತಂದ ||

ಆಗಿವ* ಹುಯ್ಯಲುಗಾರ ಬಹಳೋಲಗಕೆ ಬಂದನು;
ಮೇಳದ ಗಣಿಕೆಯರ ಮಧ್ಯದಲಿ ಮೆರೆದಿರೆ ಕಂಡನುತ್ತರನ.
ನೃಪವಿರಾಟನ ಮಗನ ಕಾಲಿಂಗೆರಗಿದನು ದೂರಿದನು ಕಳವಳವ.
*ಹೆದರಿದ

**ಗೋಪಾಲ**: ಏಳು ಮನ್ನೆಯ* ಗಂಡನಾಗು ನೃ *ಒಡೆಯ
ಪಾಲ ಕೌರವರಾಯ ತುರುಗಳ
ಕೋಳವಿಡಿದನು ಸೇನೆ ಬಂದುದು ಧರಣಿಯುಗಲದಲಿ ||
ಧಾಳಿಬರುತಿದೆ ಕರೆಸಿಕೋ ಸಿ
ನ್ನಾಳು ಕುದುರೆಯ ರಾಣಿವಾಸದ
ಗೂಳೆಯ*ವ ತೆಗೆಸು. *ಗುಂಪು

ಉತ್ತರ: ಏನೆಲವೊ ತುದಿಮೂಗಿನಲಿ ಬಿಳುಪೇನು? ಧಗೆ ಹೊಯ್ದೇಕೆ ಬಂದೆ? ಏನು ಭಯಬೇಡೆನ್ನ ಕಲಹಸಿಧಾನ ವಾರ್ತೆಯದೇನು? *ಭಾಗ್ಯ

ಗೋಪಾಲ: ಕೌರವಸೇನೆ ಬಂದುದು ತುರುವ ಹಿಡಿದರು ಬಡಗದಿಕ್ಕಿನಲಿ. ಎತ್ತ ಮನಹರಿವತ್ತ ಮೋಹರವಲ್ಲದನ್ಯವ ಮತ್ತೆ ಕಾಣೆನು! ಜೀಯ ಹದನಿದು ವೈರಿವಾಹಿನಿಯ. ಆ ಪ್ರಳಯದ ಜಲಧಿಯಲಿ ಗೋಪಾಲಬಲ ಹರಿದಳಿದು ಹಿಡಿದರು ಸೆರೆಯ ನಮರಾವತಿಯ ಸೂಳೆಯರ. ಒಳಗೆ ನೀ ಕಾದುವೊಡೆ ದುರ್ಗವ ಬಲಿಸು; ಬವರಕೆ ಹಿಂದುಗಳೆಯದೆ ನಿಲುವಮನ ನಿನಗೀಗಳುಂಟೇ ನಡೆಯಬೇಹುದು.

ಉತ್ತರ: (ಕೆಲ ಬಲನ ನೋಡಿದನು; ಮೀಸೆಯ ನಲುಗಿದನು; ತನ್ನಿದಿರ ಮೇಳದ ಲಲನೆಯರ ಮೊಗನೋಡುತುತ್ತರ ಬಿರುದ ಕೆದರಿದನು*) *ಜಂಬ ಕೊಚ್ಚಿದನು

ನೂಕು ಕುನ್ನಿಯನಾಹವದ ಭೀ
ತಾಕುಲನ ತಾನೀಗ ಹೆಂಡಿರ
ಸಾಕಿ ಬದುಕುವ ಲವಲವಿಕೆಯಲಿ ಜಾರಿ ಬಂದೀಗ ||
ಕಾಕ ಬಳಸುವ ನಿವನು ನಾನು
ದ್ರೇಕಿಸಲು ಸಮರದಲಿ ನಿಲುವರೆ
ನಾಕದವರಿಗೆ* ನೂಕದು!   * ದೇವತೆಗಳಿಗೆ

ಸತಿಯರು: ಎಸಿತು ಬಲ ಘನವಾದೊಡೇನದು
ನಿನಗೆ ಗಹನವೆ ಜೀಯ ಜಗದಲಿ
ದಿನಪನಿದಿರಲಿ ದಿಟ್ಟತನವೇ ತಮದ ಗಾವಳಿಗೆ ||
ಬಿನುಗು* ರಾಯರ ಬಿಂಕ ಗೋವರ   *ಕೀಳು
ಮೊನೆಗೆ ಮೆರೆದೊಡೆ ಸಾಕು ನಿಂದಿರು
ಜನಪ ತೋರಿಸು ಕೈಗುಣವ ಕೌರವನ ಥಟ್ಟಿನಲಿ ||

ಉತ್ತರ: (ಎಂದೊಡುಬ್ಬರಿಸಿದನು; ತಾ ಕಲಿಯೆಂದು ಬಗೆದನು. ಮಿಸೆಯನು ಬೆರಳಿಂದ ತಿರುಹುತ ಕೆಲ ಬಲದಿಂದು ಮುಖಿಯರ ನೋಡಿದನು; ನಲವಿಂದ ನುಡಿದನು ತನ್ನ ಪೂರುಷ ತನದ ಪರಿಣತಿಯ.)

ಅಹುದಹುದು ತಪ್ಪೇನು ಜೂಜಿನ
ಕುಹಕದಲಿ ಪಾಂಡವರ ಸೋಲಿಸಿ
ಮಹಿಯ ಕೊಂಡಂತೆನ್ನ ಕೆಣಕಿದನೇ ಸುಯೋಧನನು ||
ಸಹಸದಿಂದವೆ ತುರುವ ಮರಳಿಚಿ
ತಹೆನು ಬಳಿಕಾ ಕೌರವನ ನಿ
ರ್ವಹಿಸಲೀವೆನೆ ಸೂರೆಗೊಂಬೆನು ಹಸ್ತಿನಾಪುರವ ||

ಬಡ ಯುಧಿಷ್ಠಿರನೆಂದು ಬಗೆದನೆ! ಕಡುಗಿದರೆ ಕೌರವನ ಕೀರ್ತಿಯ ತೊಡೆವೆನು! ಅರಿಯನಲಾ!

ಎನುತ ಸುಕುಮಾರ ಖತಿಗೊಂಡ. ಸತಿಯರ ಮುಂದೆ ಭಾಷೆಯ ನುಡಿದ ಸುಕುಮಾರ.

ಉತ್ತರ: ದುರ್ಯೋಧನಗೆ ಮೇದಿನಿಯ ಋಣ ತೀರಿದುದು, ಮಝು, ಭಾಪು!

ಸತಿಯರು: ಅಹುದು.

ಉತ್ತರ: ಏನ ನೆನೆದನೊ ಬಂದು ಕೆಟ್ಟನು; ಭೂನರೇಂದ್ರರೊಳೆನ್ನ ತೋಳಿನನೂನ ಬಲವನು ಕೇಳಿದರಿಯನೆ ಪರ ಬಲಾಂತಕನ!

ಜವನ ಮೀಸೆಯ ಮುರಿದನೋ ಭೈ
ರವನ ದಾಡೆಯ ನಲುಗಿದನೋ ಮೃ
ತ್ಯುವಿನ ಮೇಲುದ ಸೆಳೆದನೊ ಕೇಸರಿಯ ಕೆಣಕಿದನೊ ||
ಬವರವನು ತೊಡಗಿದನಲಾ ಕೌ
ರವನಕಟ ಮರುಳಾದ!

ಕುಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ.

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮಕುಲದಲಿ ಜನಿಸಿ ಬಂದವರು ||
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳು?

ಅರಿಯೆನೇ ಗಾಂಗೇಯನನು ತಾ
ನರಿಯದವನೇ ದ್ರೋಣ ಕುಲದಲಿ
ಕೊರತೆಯಾಗಿಹ ಕರ್ಣನೆಂಬವ ನೆನಗೆ ಸಮಬಲನೆ ||
ಬರಿಯ ಬಯಲಾಡಂಬರದಿ ತುರು
ಸೆರೆಯ ಹಿಡಿದೊಡೆ ತಮ್ಮ ಹೆಂಡಿರ
ಸೆರೆಯ ತಾರದೆ ಮಾಣೆ !

ಉತ್ತರನು ಕೋಮಲೆಯರಿದಿರಲಿ ಬಾಯ್ಗೆ ಬಂದುದ
ಗಳಹುತಿದ್ದನು ಬೇಕು ಬೇಡೆಂಬವರ ನಾ ಕಾಣೆ.

ಉತ್ತರ: ಪೊಡವಿಪತಿಗಳು ಬಂದು ತುರುಗಳ
ಹಿಡಿವರೇ ಲೋಕದಲಿ ಯುಧಮರ
ಬಡಮನದ ಮನ್ನೆಯರ ಮೈಸಿರಿ ಕೌರವನೊಳಾಯ್ತು ||
ಕಡೆಗೆ ದುರ್ಯಶ ವುಳಿವುದಲ್ಲದೆ
ಬಿಡುವೆನೇ ಗೋಧನವನೆನ್ನೊಳು
ತುಡುಕಿ ಬದುಕುವನಾವನು ?

ಖಳನ ಮುರಿವೆನು ಹಸ್ತಿನಾಪುರ
ದೊಳಗೆ ಠಾಣಾಂತರವನಿಕ್ಕುವೆ
ತೊಲಗಿಸುವೆ ಕೌರವನ ಸೇನೆಯ ಧೂಳಿಪಟಮಾಡಿ ||
ಗೆಲವ ತಹೆನು !

ತನ್ನಯ ಹಿರಿದು ಪೂರುಷತನವ ತಾನಾಡಿದರೆ ಫಲವೇನು !
ಇರವಿದನೆ* ಗಹಗಹಿಸಿ ಮನದಲಿ ತರಳೆಯರು ನಗಲು;

*ಈ ಪರಿಸ್ಥಿತಿಯನ್ನು

ಉತ್ತರ : ನುಡಿದು ಫಲವೇನಿನ್ನು ಸಾರಥಿ
ಮಡಿದ ನಿನ್ನಿನ ಬವರದಲಿ ನಾ
ಮುಡುಹ*ನಾದೆನು ಶಿವಶಿವಾಯಿಂದೆನ್ನ ಕೈಮನಕೆ || *ಹೆಳವ
ಗಡಣಿಸುವ ಸಾರಥಿಯನೊಬ್ಬನ
ಪಡೆದೆನಾದೊಡೆ ಕೌರವೇಂದ್ರನ
ಪಡೆಗೆ ಹಬ್ಬವ ಮಾಡುವೆನು ತೋರುವೆನು ಕೈಗುಣವ ||

ಸಾರಥಿಯ ಶಿವ ಕೊಟ್ಟನಾದೊಡೆ
ಮಾರಿಗುಬ್ಬಸವಾಗದೆ ಅಂತಕ
ನೂರು ತುಂಬದೆ ಹಬ್ಬವಾಗದೆ ರಣಪಿಶಾಚರಿಗೆ ||
ದೋರೆಗರುಳಲಿ ದಾನವಿಯರೊಡ
ಲೇರು ಹತ್ತದೆ ಡೊಳ್ಳು ನೂಕದೆ
ಭೂರಿ ಭೇತಾಳರಿಗೆ ಹೋಹುದೆ ಬರಿದೆ ರಣ ||

ಕೇಳುತಿರ್ದನು ಪಾರ್ಥನೀತನ ಬಾಲಭಾಷೆಗಳೆಲ್ಲವನು. ಪಾಂಚಾಲೆಗೆಕ್ಕಟಿ* ನುಡಿದ: ನಾವಿನ್ನಿಹುದು ಮತವಲ್ಲ, ಕಾಲ ತುಂಬಿತು ; ನರನ ಸಾರಥಿಯೆಂದು ನೀನುತ್ತರೆಗೆ ಸೂಚಿಸು, ನನ್ನ ನೀಗಲೆ ಕರೆಸೆನಲು ; ಓಲಗಕೆ ಬಂದು ಕೈಮುಗಿದೆಂದಳೀ ಹದನ. ಕೇಳಿದೆನು ಸಾರಥಿಯ ನೆಲೆಯನು, ಕಾಳಗಕೆ ನಡೆಯಣ್ಣ ದೇವ, ನೃಪಾಲಕರ ಜಯಿಸೆಂದೊಡೆ, ಉತ್ತರ ನಗುತ ಲೇಸಾಯ್ತೆಂದು ಪರಮೋತ್ಸಾಹದಲಿ ಸೈರಂಧ್ರಿಗಿಂತೆಂದ: * ಗುಟ್ಟಾಗಿ

ಉತ್ತರ : ಸಾರಥಿಯ ಕೊಟ್ಟೆನ್ನ ನುಳುಹಿದೆ
ವಾರಿಜಾನನೆ ಲೇಸ ಮಾಡಿದೆ
ಕೌರವನ ತನಿಗರುಳ ತೆಗೆವೆನು ತಡವ ಮಾಡಿಸದೆ ||

ಆ ಸಂಪನ್ನಬಲ ನೋಲಗಕೆ ಬರೆ ಹರುಷೋನ್ನತಿಯೊ ಳುತ್ತರಕುಮಾರ ಕರೆದು ಮನ್ನಿಸಿದ.

ಉತ್ತರ: ಎಲೆ ಬೃಹನ್ನಳೆ ತೆತ್ತುದೆ*ನಗಗ್ಗಳೆಯರೊಳು ವಿಗ್ರಹ§ವು. ನೀ ಸಮರ್ಥನು. ಫಲುಗುಣನ ಸಾರಥಿಯಲ್ತೆ!

* ಒದಗಿತು. § ಯುದ್ಧ.

ನೀ ನೊಲಿದು ಮೆಚ್ಚಲು ಕಾದಿ ತೋರುವೆ ನಹಿತಸೇನೆಯಲಿ.

ಅರ್ಜುನ: ಭರತವಿದ್ಯಾ ವಿಷಯದಲಿ ಸಲೆ
ಪರಿಚಯವು ನಮಗಲ್ಲದೀ ಸಂ
ಗರದ ಸಾರಥಿತನವ ಮರೆದೆವು ಹಲವು ಕಾಲದಲಿ ||
ಅರಿಭಟರು ಭೀಷ್ಮಾದಿಗಳು ನಿಲ
ಲರಿದು!

ರಾಯರಿದಿರಿನಲಿ ನಿಲಲು ನಾನಂಜುವೆನು; ಕೊಳುಗುಳ*
ದೊಳಗೆ ಸಾರಥಿತನವ ಬಲ್ಲೆನೆ? *ಯುದ್ಧ

ಉತ್ತರ: ಆನಿರಲು ಭೀಷ್ಮಾದಿಗಳು ನಿನ
ಗೇನ ಮಾಡಲು ಬಲ್ಲರಳುಕದೆ
ನೀನು ಸಾರಥಿಯಾಗು ನಿಮಿಷಕೆ ಗೆಲುವೆ ನವರುಗಳ ||

ಕಾವಳ ವಂಜಿಸುವುದೇ ಇನನ? ಭಂಜಿಸುವೆನಹಿತರನು; ನಿನಗಂಜಿಕೆಯದೇಕೆ?

ಚಾರು ತುರಗಾವಳಿಯ ಬಿಗಿದನು; ತೇರ ಸಂವರಿಸಿದನು; ರಥವೇರಿದನು ಕಲಿಪಾರ್ಥ. ಬಿರುದಿನ ಭಾಷೆಗಳ ನಡಿಗಡಿಗೆ ಕೇಳುತೆ ಆ ಸುಯೋಧನ ಬಲವ ಕಾಲನ ವಿಾಸಲಿಗೆ ಮಾಡುವೆ ನೆನುತೆ ಪರಿತೋಷ ಸಂರಂಭದಲಿ ಮಾತಿನವೀರ ಬರುತಿರ್ದ.

ಮಂಗಳಾರತಿ ಯೆತ್ತಿದರು ನಿಖಿಳಾಂಗನೆಯರುತ್ತರಗೆ. ನಿಜ ಸರ್ವಾಂಗ ಶೃಂಗಾರದಲಿ ಹೊಳೆಯುತ ಬಂದು ರಥವೇರಿ ರಾಜ ಕುಮಾರನನುವಾದ. ನರನು ತಲೆಕೆಳಗಾಗೆ ಕವಚವ ಸರಿಯು ತಿರೆ ಘೊಳ್ಳೆಂದು ಕೈ ಹೊಯ್ದರಸಿಯರು ನಗೆ, ಸಾರಥಿಯರಿಯ ತಪ್ಪೇನೆನುತ ಉತ್ತರ ತಾನೆ ತೊಡಿಸಿದನು. ಬವರವನು ನಮ್ಮಣ್ಣ ಗೆಲಿದಪನು, ಅವರವರ ಪರಿಧಾನ*ವಾಭರಣವನು ಸಾರಥಿ ಕೊಂಡುಬಾ ಯೆಂದಳು ಸರೋಜಮುಖಿ. *ವಸ್ತ್ರ

ನೃಪತಿಲಕನತಿವೇಗದಲಿ ರಥವನು ಸ್ಮಶಾನದ ತರೆ, ಕಂಡನುತ್ತರ ಮುಂದೆ ದೂರದಲಿ ಸಕಲಮೋಹರವ. ಪಡೆ ವಿರಾಟನ ಸುತನ ಕಂಗಳಿ ಗೊಡನೊಡನೆ ದಾವಾಗ್ನಿಯಂತಿರೆ ತೋರಿತಿದಿರಿನಲಿ.

ಕಡೆಗೆ ಹಾಯವು ಕಂಗಳೀ ಬಲ
ಗಡಲ ಮನವೀಸಾಡಲಾರದು
ಒಡಲು ವಿಡಿದಿರಲೇನ ಕಾಣಲು ಬಾರದದ್ಭುತವ ||
ಪೊಡವಿ ಯಿಾದುದೊ ಮೋಹರವ ನಿದ
ರೊಡನೆ ಕಾದುವನಾವ ಆತನೆ
ಮೃಡನು ಶಿವಶಿವ ಕಾದಿ ಗೆಲಿದೆವು ಬಲಕೆ ನಮೊ ಯೆಂದ ||

ಕಾಳಕೂಟದ ತೊರೆಯೊ ಮಾರಿಯ
ಗೂಳೆಯವೊ ಮೃತ್ಯುವಿನ ಗಂಟಲ
ತಾಳಿಗೆಯೊ ಭೈರವನ ಥಟ್ಟೋ ಜವನ ಜಂಗುಳಿ†ಯೊ ||†ತಂಡ
ಕಾಲರುದ್ರನ ನೊಸಲ ವಹ್ನಿ
ಜ್ವಾಲೆಯೋ ಕೌರವನ ಸೇನಾ
ಜಾಲವೋ ಶಿವ ಯೆನುತ ಹೆದರಿದನಂದು ಸುಕುಮಾರ ||

ಸಾರೆ ಬರಬರಲು ಅವಯವ ವಡಿಗಡಿಗೆ ನಡುಗಿ, ತಾಳಿಗೆ ನೀರು ತೆಗೆದುದು, ತುಟಿಯೊಣಗಿ ಸುಕುಮಾರ ಕಣ್ಣೆವೆ ಸೀಯೆ. ಕೈಯಲಿ ಮುಚ್ಚಿದನು ಮುಖವ.

ಉತ್ತರ: ಹಸಿದ ಮಾರಿಯ ಮಂದೆಯಲಿ ಕುರಿ
ನುಸುಳಿದಂತಾದೆನು ಬೃಹನ್ನಳೆ
ಎಸಗದಿರು ತೇಜಿಗಳ ತಡೆ ಚಮ್ಮಟಿಗೆಯನು ಬಿಸುಡು ||
ಮಿಸುಕಬಾರದು ಪ್ರಳಯಕಾಲನ
ಮುಸುಕ ನುಗಿವವನಾರು ಕೌರವ
ನಸಮಬಲನೈ ರಥವ ಮರಳಿಚು ಜಾಳಿಸುವೆ† || †ನುಸುಳಿಕೊಳ್ಳುವೆ

ಅರ್ಜುನ: ಎಲೆ ಕುಮಾರಕ ಮೊದಲ ಚುಂಬನ
ದೊಳಗೆ ಹಲು ಹೋದಂತೆ ಕಾಳಗ
ದೊಳಗೆ ಬೆರಸದ ಮುನ್ನ ಹಿಡಿದೈ ಸಮರಭೀತಿಯನು ||
ಅಳುಕಲಾಗದು ನಿಮ್ಮ ತಂದೆಯ
ಕುಲಕೆ ಕುಂದನು ತಾರದಿರು ಮನ
ಗೆಲವಿನಲಿ ಕಾದು !

ರಥವನು ಹರಿಸಿದನು ಪಾರ್ಥ.

ಉತ್ತರ: ಏಕೆ ಸಾರಥಿ ರಥವ ಮುಂದಕೆ
ನೂಕಿ ಗಂಟಲ ಕೊಯ್ವೆ ಸುಡುಸುಡು
ಕಾಕ§ಲಾ ಕಣ್ಬೊಡೆದವೇ ಕಾಣಾ ಮಹಾಬಲವ || § ಕೆಟ್ಟುದು.
ನಾಕನಿಳಯರಿಗರಿದು ನಿನಗೆ ವಿ
ವೇಕ ವೆಳ್ಳನಿತಿಲ್ಲಲಾ ತೆಗೆ
ಸಾಕು ವಾಘೆಯ† ಮರಳಿ ಸೆಳೆ ತೇಜಿಗಳ ತಿರುಹು ! †ಲಗಾಮನ್ನು

ನುಡಿಯ ಕೇಳದೆ ಮುಂದೆ ನಾಲ್ಕೆಂಟಡಿಯ ನರ್ಜುನ ರಥವ

ನಡೆಸಲು, ಹಿಡಿದ ಬಿಲ್ಲಂಬುಗಳು ಬಿದ್ದುವು ಕೈಯ ನರತೆಗೆದು.

ಉತ್ತರ: ಹಿಡಿ ಹಯವ, ಇರಿಗಾರ ಸಾರಥಿ! ನುಡಿವವರು ನಾವು ಹಗೆಗಳೆ? ನಿನ್ನೊಡೆಯರಲ್ಲಾ? ಸ್ವಾಮಿ ದ್ರೋಹಿತೆ ಲೇಸು ಲೇಸು!

ಅರ್ಜುನ ನಗುತೆ ರಥವನು ಮುಂದೆ ನಾಲ್ಕೆಂಟಡಿಯ ನೂಕಲು, ಕೊಂದನೀ ಸಾರಥಿ ಯೆನುತ, ಸಂವರಿಸಿ ಮುಂಜೆರಗ, ನಿಂದು, ಮೆಲ್ಲನೆ ರಥದ ಹಿಂದಕೆ ಬಂದು, ಧುಮ್ಮಿಕ್ಕಿದನು; ಬದುಕಿದೆನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ. ಕೆಟ್ಟೋಡುತಿರಲು, ಎಲೆ ಪಾಪಿ ಹಾಯ್ದನು, ಹಿಡಿಯಬೇಕೆನುತ, ಅರ್ಜುನ ಉತ್ತರನ ಬೆಂಬತ್ತಿ*ದನು. ಅತ್ತಲು ನೋಡಿ ಕೌರವಸೇನೆ, ಎಲೆಲೆ ಕಾದಲು ಬಂದ ವೀರನ ಬಲುಹು ನೋಡಾ! ಎನುತ ಕೆಡೆದುದು ನಗೆಯ ಕಡಲೊಳಗೆ. ಇತ್ತ ಇಟ್ಟಣಿಸಿ ನರ ನೂರು ಹೆಜ್ಜೆಯೊಳಟ್ಟಿ ಹಿಡಿದನು. *ಬೆನ್ನಹತ್ತಿ

ಅರ್ಜುನ: ಇದೇನ ಮಾಡಿದೆ? ಹೋಪೆಯಾದರೆ ಕಿತ್ತು ಬಿಸುಡುವೆ ನಿನ್ನ ಶಿರವನು! ನಿಲ್ಲು, ನಿಲ್ಲು!

ಉತ್ತರ: ಮಿತ್ತುವೊ ಸಾರಥಿಯೊ ಪಾಪಿಯನೆತ್ತಣಿಂದವೆ ಮಾಡಿಕೊಂಡೆ!

ಅರ್ಜುನ: ದಿಟ್ಟತನ ಮಿಗೆ ಹೆಂಗಳಿದಿರಲಿ ಹೊಟ್ಟೆ§ಗುಟ್ಟಿದೆ, ಹಗೆಗಳಿದಿರಲಿ ಬಿಟ್ಟುಕೊಂಡೆ! ದುರಾತ್ಮ, ಮುರಿದೆ ವಿರಾಟನನ್ವಯವ! † §ವ್ಯರ್ಥವಾದ ಮಾತನ್ನಾಡಿದೆ, †ವಂಶ

ಉತ್ತರ: (ಹಲುಗಿರಿದು ಬಾಯೊಳಗೆ ಬೆರಳಿಟ್ಟು ಅಲುಕಿತಲೆವಾಗಿದನು) ಸಾರಥಿ ಕಳುಹಿ ಕಳೆಯೈ, ನಿನ್ನ ಬಸಿರಲಿ ಮರಳಿ ಬಂದವನು. ಕೊಳುಗುಳದೊಳೀ ಯೊಡ್ಡ ಮುರಿವಗ್ಗಳಿಕೆ

ಯುಂಟೇ! ಲೋಗರಿಂದವೆ ಕೊಲಿಸದಿರು; ನೀಂ ಕುತ್ತಿ*
ಕೆಡಹು, ಕಠಾರಿಯಿದೆ! * ತಿವಿದು

ಅರ್ಜುನ: (ಮನದೊಳ್ ಒಡಲೊಡೆವಂತೆ ನಗುತ, ಗಜರಿ
ದನು.) ಎಲವೊ, ಸಭೆಯಲಿ ವನಜಮುಖಿಯರ ಮುಂದೆ ಸೊರ
ಹಿದ* ಬಾಯ್ಗೆ ಬಂದಂತು. ಅನುವರ†ದೊಳೇನಾಯ್ತು? ರಿಪು
ವಾಹಿನಿಯನಿರಿಯದೆ ನಾಡನರಿಯವೊಲೆನಗೆ ನೀ ಹಲುಗಿರಿಯೆ
ಬಿಡುವೆನೆ? ಕಾಮು, ನಡೆ! ಸಾವಿಗಂಜಿದೆವೇ ನಪುಂಸಕರೆಮ್ಮ
ನೋಡು! *ಹರಟಿದೆ †ಯುದ್ಧ

ಉತ್ತರ: ನೀವು ವೀರರು, ನೆರೆ ನಪುಂಸಕರಾವು, ಸಾವವರಲ್ಲ.

ಅರ್ಜುನ: ಹೇವ ಬೇಡಾ* ವೀರರೀಪರಿ ಜೀವಗಳ್ಳರ
ಪಥವಹಿಡಿವರೆ? *ನಾಚಿಕೆ ಬೇಡವೆ?

ಉತ್ತರ: ಲೋಕದ ಜೀವಗಳ್ಳರಿಗಾವು ಗುರುಗಳು, ಬಿಟ್ಟು
ಕಳುಹೈ!

ಅರ್ಜುನ: ಹರುಕನೇ ನೀನೆಲವೊ, ರಾಯರೊಳುರುವದೊರೆ
ನಿಮ್ಮಯ್ಯ. ನಿನಗಿಂದಿರಿದು ಮೆರೆವವಸರವಲಾ. ಜವ್ವನದ
ಧುರಭರ*ವ ಸರಿಗಳೆಯುದಪಕೀರ್ತಿ ರವಿ ಶಶಿಮುರಿದು ಬೀಳ್ವನ್ನೆ
ಬರ! ಎಲೆ, ನರಗುರಿಯೆ, ನಡೆ ಕಾಳಗಕೆ. *ಅಧಿಕ್ಯ

ಎನುತ ಹಿಡಿದೆಳೆವನುತ್ತರನ.

ಉತ್ತರ: ನಾವಂಜುವೆವು ಕಾಳಗಕೆ.

ಅರ್ಜುನ: ಕೊಳುಗುಳದೊಳೋಡಿದೊಡೆ ಹಜ್ಜೆಗೆ ಫಲ
ಮಹಾಪಾತಕವು.

ಉತ್ತರ: ಧುರಮೊಳೋಡಿದ ಪಾತಕವ ಭೂಸುರರು
ಕಳೆದಪರು.

ಅರ್ಜುನ: ಮುಂದಣಿಗೊಲಿದು ಹಜ್ಜೆಯನಿಡಲು ಹಜ್ಜೆಯೊಳಶ್ವಮೇಧ ಫಲ.

ಉತ್ತರ: ಅಶ್ವಮೇಧವ ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದು.

ಅರ್ಜುನ: ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು.

ಉತ್ತರ: ಸುರರ ಸತಿಯರನೊಲ್ಲೆವು; ಎಮಗೆಮ್ಮರಮನೆಯ ನಾರಿಯರೆ ಸಾಕು.

ಅರ್ಜುನ: ಸುರೇಂದ್ರನು ನೆಲವನುಗ್ಘಡಿಸುವನು*; ವೀರಸ್ವರ್ಗವಹುದು.

* ಪರಾಕುಹೇಳುವನು

ಉತ್ತರ: ಎಮ್ಮರಸುತನ ವೆಮಗಿಂದ್ರಪದ. ನೀ ಬಿಟ್ಟು ಕಳುಹು.

ಅರ್ಜುನ: ಆಳೊಳೊಡ್ಡುಳ್ಳವನು ತೋರಿಯ
ತೋಳುಗಳ ಹೊತ್ತವನು ಮನೆಯಲಿ
ಸೂಳೆಯರ ಮುಂದುಲಿದು ಬಾಷ್ಕಳ† ಗೆಡೆದು ಬಂದೀಗ ||
ಕೋಲನಿಕ್ಕದೆ§ ಗಾಯವಡೆಯದೆ
ಕಾಲುವೇಗವ ತೋರಿದೊಡೆ ನಿ
ನ್ನೋಲಗದೊಳೆಂತಕಟ ನಾಚದೆ ಕುಳಿತಿಹೆಯೊ! ||

† ಹರಟೆ
§ ಬಾಣಹಾಕದೆ

ಉತ್ತರ: ಕಿತ್ತುಕೊಂಡಾ ನಾಚಿಕೆಗೆ ನೆರೆ
ಕುತ್ತಿಕೊಳಬೇಕೆಂಬ ಗಾದೆಯ
ನಿತ್ತ ಹೊದ್ದಿಸಬೇಡ ನಾವಂಜುವೆವು ಕಾಳಗಕೆ ||
ತೆತ್ತಿಗ†ನು ನೀನಹಿತನಂತಿರೆ
ಮಿತ್ತುವಹರೇ ನಿನಗೆ ಬೇಡಿದ
ನಿತ್ತು ಸಲಹುವೆನೆನ್ನ ಕೊಲಿಸದೆ ಬಿಟ್ಟು ಕಳುಹೈ ||

† ನಂಟ

ಅರ್ಜುನ: ಪೊಡವಿಪತಿಗಳ ಬಸಿರು ಬಂದೀ
ಯೊಡಲ ಕಕ್ಕುಲಿತೆ†ಯನು ಕಾಳಗ † ಅತ್ಯಾಸೆ
ದೆಡೆಗೆ ಮಾಡಿದರಿಲ್ಲ ಭೂತಭವಿಷ್ಯವಾನದಲಿ ||
ನುಡಿಯಬಹುದೇ ಬಂಜೆ ನುಡಿಯನು !

ಉತ್ತರ: ವಳಿತ†ವನು ವಾರುವ‡ವ ಮುಕ್ತಾ †ಭೂಮಿ
‡ಕುದುರೆ
ವಳಿ ಯಲಂಕಾರವನು ಗಜವನು
ಲಲನೆಯರ ನಾನೀಸಿಕೊಡುವೆನು ರಾಜಭವನದಲಿ ||

ಅರ್ಜುನ: ಸುಡು ಸುಡೆಲವೋ ರಾಜಬಾಹಿರ! ನಡೆ
ವರೂಥದ§ ಹೊರೆಗೆ. ಕಾಡಲು ಬೇಡ, ಬಾ ! § ತೇರಿನ

ಉತ್ತರ: ಎಲೆ ಬೃಹನ್ನಳೆ ! ಯೆಮ್ಮ ಬೊಪ್ಪನು ಸಲಹಿದಕೆ
ಕೈಯೊಡನೆ* ತೋರಿದೆ. ಕಲುಮನವಲಾ ನಿನ್ನದು ! *ಬೇಗನೆ

ಅರ್ಜುನ: ಕಾದುವೆನು ಮಾರೊಡ್ಡಿನಲಿ, ನೀ ಚೋದಿ
ಸ*ನ್ನಯ ರಥವ. ಆಕಟಾ, ವಾದವನು ನೆರೆಮಾಣು. ಸಾರಥಿ
ಯಾಗು ಸಾಕು. *ನಡೆಸು

ಉತ್ತರ: ಆದಿಯಲಿ ನೀನಾವ ರಾಯರ ಕಾದಿ ಗೆಲಿದೈ ?
ಹುಲು ಬೃಹನ್ನಳೆಯಾದ ನಿನಗೀ ಕದನ ನಾಟ್ಯದ ವಿದ್ಯೆಯಲ್ಲ !

ಅರ್ಜುನ: ಎಲವೊ, ಸಾರಥಿಯಾಗು ನಡೆ. ಗೆಲುವೆ ನೀ
ಪ್ರತಿಭಟನಿಕಾಯ†ವ ನಿನ್ನ ಸಾಕ್ಷಿಯಲಿ. †ಸಮೂಹ

ಉತ್ತರ : ಎನ್ನವಂದಿಗ ರಾಜಪುತ್ರರಿ
ಗಿನ್ನು ಮೊಗಸಲು* ಬಾರದಿವೆ ನೀ *ಭೇದಿಸಲು
ನೆನ್ನ ಸಾರಥಿಮಾಡಿಕೊಂಡೀ ದಳವ ಮುರಿವೆಯಲ ||

ಅನ್ನಿಯರ ಮನಗಾಂಬರಲ್ಲದೆ
ತನ್ನ ತಾ ಮನಗಾಂಬರೇ ಈ
ಗನ್ನಗತಕವ ನಾವು ಬಲ್ಲೆವು ಬಿಟ್ಟು ಕಳುಹೈ ||

ಅರ್ಜುನ : ಸಾರಥಿಯಾಗು ಬಾ. ಗಳಹಿದರೆ ಕಟವಾಯ ಕೊಯ್ವೆನು.

ಉತ್ತರ : ಸಾರಥಿ! ಕೆಡಿಸದಿರು ವಂಶವನು; ರಾಯನ ಹಿಂದೆ ಹೆಸರಿಲ್ಲ. ಮಹಾಹವವೆನಗೆ ನೂಕದು ; ತೊಡೆಯದಿರು ನೊಸಲಕ್ಕರವ !

ಅರ್ಜುನ : ಸುಡಲಿ ಜೀವನದಾಸೆಯನು! ಕೆಡುವೊಡಲ ಭುಕ್ತಿಯ ಭೋಗಕೋಸುಗ ಕೆಡಿಸಬೇಡ ಇಹಪರದ ಗತಿಗಳ!

ಉತ್ತರ : ನೀನೊಡೆಯ, ಕಿಂಕರರಾಗಿಹೆವು ನಾವಿಂದು ಮೊದಲಾಗಿ, ಬಿಡು !

ಅರ್ಜುನ : ಷೇಡತನ* ಬೇಡೆಲವೊ! ರಣದೊಳಗೋಡಿಸುವೆ ನಹಿತರನು. ಕೋಡದಿರು,† ಕೊಂಕದಿರು; ಧೈರ್ಯವ ಮಾಡಿ ಸಾರಥಿಯಾಗು! ಗೆಲುವೆ ನೀ ಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ ; ಬಳಿಕ ನೀ ನಗು, ನಡೆ!

*ಹಳ್ಳಿಯುವನ ಬುದ್ಧಿ. †ಅಂಜದಿರು.

ಎನುತ ಕಲಿಮಾಡಿ ಕೊಂಡೊಯ್ದನು ಸಮೀಪದ ಶಮಿಯ ಹೊರೆಗಾಗಿ.

---

## ೫. ಹಾಸ್ಯ

ಈ ಅಧ್ಯಾಯವು ಕುಮಾರವ್ಯಾಸನ ಭಾಷೆಯ ಸ್ವರೂಪವನ್ನೂ ಹಾಸ್ಯದ ವೈಖರಿಯನ್ನೂ ತೋರಿಸುವುದಕ್ಕಾಗಿ ರಚಿಸಿದುದು. ಹಿಂದಿನ ಅಧ್ಯಾಯಗಳಲ್ಲಿ ಆಗಲೇ ಕವಿಯ ಮಾತಿನ ರೀತಿ ಓದುಗರಿಗೆ ಪರಿಚಯವಾಗಿದೆ. ಕನ್ನಡ ನುಡಿ ಈ ಕವಿ ಹೇಳಿದಹಾಗೆ ಕೇಳುತ್ತದೆ. ಪದಗಳನ್ನು ಅಷ್ಟೊಂದು ಲೀಲಾಜಾಲವಾಗಿ, ಅಷ್ಟೊಂದು ಸತ್ವದೊಡಗೂಡಿಸಿ, ಅಷ್ಟೊಂದು ಸ್ವಾರಸ್ಯದಿಂದ ಉಪಯೋಗಿಸುವ ಕವಿಗಳು ಅಪರೂಪ. ಅವನ ಹಾಸ್ಯ ಎಷ್ಟು ವಿಧವಾದುದೆಂಬುದನ್ನು ಹೇಳತೀರದು. ವಿನೋದೋಕ್ತಿ, ಗೇಲಿ, ಕುಚೋದ್ಯ, ವಿಡಂಬನ, ಮೂದಲೆ, ಬಯ್ಗುಳ, ಕಟಕಿ ಮುಂತಾದ ಎಲ್ಲ ವಿಚಾರಗಳಲ್ಲಿಯೂ ಕುಮಾರವ್ಯಾಸ ನುರಿತ ಕೈ.

### ಅರ್ಜುನ ಯತಿವೇಷದಲ್ಲಿ ದ್ವಾರಕಿಗೆ ಬಂದಾಗ

ಬಾಲಕಿಗೆ ಸನ್ಯಾಸಿದೇವರಮೇಲೆ ಮನವಾಯ್ತು; ಅವರಿ
ಗಾಕೆಯಮೇಲೆ ನೆಲಸಿತು ಚಿತ್ತ; ಕಾಣೆನು ಜಪಸಮಾಧಿಗಳ ||

### ಜರಾಸಂಧ ಕೃಷ್ಣನಿಗೆ

ಆವಂಜುವೆವು, ರಣನಾಟಕ ಪಲಾಯನ ಪಂಡಿತರು ನೀ
ವೆಂದನಾ ಮಗಧ.

### ಅಶ್ವತ್ಥಾಮ ಸಾತ್ಯಕಿಯನ್ನು ಅಟ್ಟಿಕೊಂಡು ಹೋಗುತ್ತ

ಮಕ್ಕಳು ಮರಿಗಳಿಗೆ ರಣವೇಕೆ? ಯಾದವರ ಬಡಕರುವೆ,
ನೀ ಬಾ!

### ಬಾಲಾಟದ ಕುಚೋದ್ಯ

ಆದರೊಳೊಬ್ಬನೆ ಭೀಮನನಿಬರ
ಸದೆವ ತಾ ಸೋತೊಡೆ ವಿಭಾಡಿಸಿ† †ಹೊಡೆದು
ಕೆದರುವನು ಗೆದ್ದೋಡಿದರೆ ಬೆಂಬತ್ತಿ ಹಿಡಿದೆಳೆದು ||

ಸದೆದು ಬಿಡುವನು ಮುನ್ನ ಭೀಷ್ಮಂ
ಗೊದರಿ ದೂರುವನು.

ಆಳುತ ಧೃತರಾಷ್ಟ್ರಂಗೆ ಭೀಮನು
ಕಳೆದ ಹಲುಗಳ ನೊಡೆದ ಮೊಳಕಾ
ಲ್ಗಳನು ತೋರಿಸಿ ದೂರುವರು ದುರ್ಯೋಧನಾದಿಗಳು ||
ಮುಳುಮೊನೆಗಳಲಿ ಗೀರಿ ನೆತ್ತರು
ಗಳೆದು ಹುಡಿಯಲಿ ಹೊರಳಿ ತಾ ಬಂ
ದಳುತ ಧೃತರಾಷ್ಟ್ರಂಗೆ ಭೀಷ್ಮಗೆ ದೂರುವನು ಭೀಮ ||

**ಅರ್ಜುನನ ಸಹಾಯಕ್ಕೆ ನೇಮಿತನಾದ ಭೀಮ ನಡೆದು ಶತ್ರು ಸೈನ್ಯದ ಮುಖದಲ್ಲಿ ದ್ರೋಣನನ್ನು ಕಾಣುವನು**

ಈತನೊಡನಂಬಿನಲಿ ಕಾದಲು
ಭೂತನಾಥಂಗರಿದು ಸಾರಥಿ
ಪೂತುರೇ ಎನುತಿದಿರ ಸೂಚಿಸಿ ತುಡುಕಿದನು ಗದೆಯ ||

ಇದು ನಿಮಗೆ ವಂದನೆಯೆನುತ ನಿಜ
ಗದೆಯ ಲಾತನ ರಥವ ಹುಡಿಗು
ಟ್ಟಿದನು ಸುರಿಗೆಯನುಗಿಯ ಲಪ್ಪಳಿಸಿದನು ಮೋಹರವ ||
ಇದಿರಲಿರ ಲಳವಡದೆ ಗುರು ಹಿಂ
ಗಿದನು ಶಕಟ ವ್ಯೂಹವನು ಮ
ಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ ||

**ಸ್ವಯಂವರ ಸಮಯದಲ್ಲಿ ಅಣ್ಣನಾಜ್ಞೆಯಂತೆ ಅರ್ಜುನನು ಧನುವನ್ನು ಭೇದಿಸಲು ಎದ್ದಾಗ**

ಏನು ಸುದ್ದಿಯುಪಾಧ್ಯರೆದ್ದಿರಿ
ದೇನು ಧನುವಿಂಗಲ್ಲಲೇ ತಾ
ನೇನು ಮನದಂಗವಣೆ ಬಯಸಿದಿರೇ ನಿತಂಬಿನಿಯ ||

ವೈನತೇಯನ ವಿಗಡಿಸಿದ ವಿಷ
ವೇನು ಸದರವೊ ಹಾವಡಿಗರಿಗಿ
ದೇನು ನಿಮ್ಮುತ್ಸಾಹವೆಂದುದು ಧೂರ್ತವಟುನಿಕರ ||

ಧನು ತನಗೆ ನೆಗಹಲ್ಕೆ ಕೃಷ್ಣಾ
ಜಿನವೊ ಸಾಲಗ್ರಾಮದೇವರೊ
ವಿನುತ ತುಲಸಿಯೊ ಕುಶೆಯೊ ದರ್ಭೆಯೊ ಸಮಿಧೆಗಳ
ಹೊರೆಯೊ ||

ನನೆದ ತಿಲವೋ ಷೋಣಿದೌಪಾ
ಸನದ ಕೊಳವಿಯೊ ಬಣಗು ವಿಪ್ರನ
ನೆನಹ ನೋಡಿರೆ ಘನವಲಾ ದ್ರೌಪದಿಯ ಸೌಭಾಗ್ಯ ||

ಇತ್ತ ನೋಡೌ ತಾಯೆ ಹಾರುವ
ರತ್ತ ಗಡ್ಡದುಪಾಧ್ಯರನು ತಾ
ವೆತ್ತುವರು ಗಡ ಧನುವನೆಸುವರು ಗಡ ತಿಮಿಂಗಿಳನ ||
ಹೊತ್ತುಗಳೆವರೆ ಲೇಸು ಬಳಿಕಿ
ನ್ನುತ್ತಮರಲಾ ವಿಪ್ರರೆನೆ ತಲೆ
ಗುತ್ತಿ ನಾಚಿದಳುಂಗುಟದ ಲಾಂಕುತ ಮಹೀತಳವ ||

ಎಲವೊ ಮಟ್ಟೆಯ ಮದನ ದರ್ಭೆಯ
ತಿಲದ ಮನ್ಮಥ ವಿಮಳಧೋತ್ರದ
ತಳಿರುಗಾಸೆಯ ಕಾಮ ಕೃಷ್ಣಾಜಿನದ ಕಂದರ್ಪ ||
ನಳಿನಮುಖಿಯನು ವರಿಸು ಬಾ ನಿನ
ಗಳವಡುವನೆಲೆ ಯಕ್ಕ ಕೇಳೌ
ತಲೆವಿಡಿವೆವಾವ್ ನೋಡು ಯೆಂದರು ನಗುತ ಚಪಳೆಯರು ||

**ಇಂದ್ರನ ಪಟ್ಟಣದಲ್ಲಿದ್ದಾಗ ಊರ್ವಶಿ ತನ್ನಲ್ಲಿಗೆ ಬರಲು**

ನೀವೆಮ್ಮ ವಂಶೋ
ದ್ಭವಕೆ ಜನನಿಯಲಾ ಯೆನುತ ವಿನಯದಲಿ ನರ ನುಡಿದ ||

ಆಯ್ಯನಯ್ಯನು ನಿಮ್ಮವರ ಮು
ತ್ತಯ್ಯನಾತನ ಭಾವ ಮೈದುನ
ನಯ್ಯನಗ್ರಜರನುಜ ರೆಂಬೀ ಜ್ಞಾತಿಬಾಂಧವರ ||
ಕಯ್ಯಲರಿಗಳ ಹೊಯ್ದು ಸಿರನರ
ದುಯ್ಯಲಾಡಿದವರ್ಗೆ ಮೇಣ್ ಮಖ
ದಯ್ಯಗಳಿಗಾನೊಬ್ಬಳೆಂದಳು ನಗುತ ನಳಿನಾಕ್ಷಿ ||

**ಅಭಿಮನ್ಯು ಯುದ್ಧ ಮಾಡುತ್ತ**

ಮಗುವು ನೀ ಕೆಡಬೇಡ ಹೋಗೆನು
ತಗಣಿತಾಸ್ತ್ರವ ಸುರಿವು ತೈತರೆ
ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ ||
ಮಗುವು ತಾನಹೆ ತನ್ನ ಬಾಣಕೆ
ಮಗುವುತನ ಬೇರಿಲ್ಲ ವರ ಹರ
ಹುಗಳ ನಿಮಿಷವು ನಿಂದು ನೋಡೆಂದೆಚ್ಚನಭಿಮನ್ಯು ||

**ದುಶ್ಶಾಸನ ಇದಿರಾಗಿ**

ಆ ಕಿರೀಟಿ ವೃಕೋದರರು ವೈ
ಸೋಕಿದರೆ ಸಂತೋಷ ನೀನವಿ
ವೇಕಿ ಬಾಲಕನೇನ ಮಾಡುವೆನೆಂದನವ ನಗುತ ||

ಕೊಳಚೆ ನೀರನು ದಾಂಟಲರಿಯದೆ
ಜಲಧಿ ಕಾಲ್ವೊಳೆಯೆಂಬ ಭಂಡರ
ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು ||

ಬಳಿಕ ಭೀಮಾರ್ಜುನರ ಬಯಸುವು
ದೆಲೆ ಮರುಳೆ ನಿನ್ನೊಡಲ ಸೀಳಿಯೆ
ತಿಳಿ ರಕುತದಲಿ ತಾಯ ತುರುಬನು ನಾದಿಸುವೆನೆಂದ ||

**ದುರ್ಯೋಧನನ ಮಕ್ಕಳು ಇದಿರಾಗಲು**

ದಿಟ್ಟರಹರೋ ಲಕ್ಷಣರು ಜಗ
ಜಟ್ಟಿಗಳಲಾ ರಾಜ ಕುಲದಲಿ
ಹುಟ್ಟಿದರೆ ಕೆಲರೀಸು ಚಪಳತೆ ಯಾರಿಗುಂಟೆನುತ ||
ಕಟ್ಟಿದನು ಕಣೆ† ಗಳಲಿ ಸುತ್ತಲು
ತಟ್ಟಿವಲೆಗಳ ಸೋಹಿನಲಿ ಬೆ
ನ್ನಟ್ಟಿ ಪಾರ್ಥಕುಮಾರ ಸದೆದನು ವೈರಿ ಮೃಗಕುಲವ ||

† ಬಾಣ

**ಕೌರವನನ್ನು ಬಿಡಿಸಲು ಬಂದ ಧನಂಜಯನಿಗೆ ಗಂಧರ್ವರಾಯ ಚಿತ್ರಸೇನ**

ಹುಲಿಯ ಮುರಿದೊತ್ತಿದರೆ ಪಶುಸಂ
ಕುಲಕೆ ಸಂಕಟವೇನು ವಾಯಸ
ಕುಲವ ಕೈಮಾಡಿದರೆ ಕೋಟಲೆಯೇನು ಕೋಗಿಲೆಗೆ ||
ಖಳರ ಕೊಪ್ಪರಿಸಿದರೆ§ ಸುಜನರ
ತಲೆಗೆ ವೇದನೆಯೇನು ಕೌರವ
ಕುಲವ ಕಟ್ಟಿದರೇನು ಜಠರದ ಶೂಲೆ ನಿನಗೆಂದ ||

§ ತುಳಿದುಹಾಕಿದರೆ

ಹೋದ ಮಾರಿಯ ಕರೆದು ಮನೆಯೊಳ
ಗಾದರಿಸಿದವರುಂಟೆ ನೀರಲಿ
ನಾದ ಕೆಂಡವನುರುಹಿ ಮುಡಿದವರುಂಟೆ ಮುಂಡೆಯಲಿ ||
ಕೈದು ಮುರಿದರೆ ಹಗೆಗೆ ತನ್ನಯ
ಕೈದ ಕೊಟ್ಟವರುಂಟೆ ಕುರುಪನ
ತೀದರೀತನ ಬಿಡಿಸಿಕೊಂಬುದು ಲೇಸೆ ನಿಮಗೆಂದ ||

**ಕೌರವ ಸಂಜಯನ ಮೂಲಕ ಪಾಂಡವರಿಗೆ ಕಳಿಸಿದ ಸಂದೇಶ**

ಮೊದಲೊಳಮಲ ಬ್ರಹ್ಮಚರ‍್ಯವು
ಮದುವೆಯಾಯಿತು ಬಳಿಕ ವನವಾ
ಸದೊಳು ವಾನಪ್ರಸ್ಥ ವೆಂಬಾಶ್ರಮವ ನಳವಡಿಸಿ ||
ತುದಿಗೆ ತಾ ಸನ್ಯಾಸವನು ಮಾ
ಡಿದನು ಮತ್ತಳುಪುವೊಡೆ ರಾಜ್ಯದ
ಪದವಿ ಗನುಚಿತವಾಯ್ತು ಯಮಜಂಗೆಂದು ಹೇಳೆಂದ ||

**ಭೀಮ ಕೌರವನಿಗೆ ಹಿಂದಿರುಗಿಸಿದ ಸಂದೇಶ**

ತೊಡೆಗಳಿಗೆ ಸುಕ್ಷೇಮವೇ ನಿ
ನ್ನೊಡೆಯ ಸವನೊಡಹುಟ್ಟಿದನ ವೈ
ಜಡಿದುದೇ ಪಾಲಿಸಿದೊಡಸಿಬರಿಗಹುದು ರುಧಿರಜಲ ||
ಒಡನೆ ಹುಟ್ಟಿದ ನೂರ್ವರುಂ ವೈ
ಗೆಡರಲೇ ಬೆಸಗೊಳ್ವ ದಂಜದೆ
ಒಡೆಯರಿಗೆ ಹಣೆಗೊಂಡೆ ಹೇಳೆಂದಟ್ಟಿದನು ಭೀಮ ||

**ಯುದ್ಧದಲ್ಲಿ ದ್ರೋಣ ಧರ್ಮರಾಯನನ್ನು ಅಟ್ಟಿಕೊಂಡು ಹೋಗುತ್ತ**

ಎಲ್ಲಿ ಹೊಗುವೈ, ಕಂದ, ಕುಂತಿಯ ಜಠರ ವಲ್ಲವಲಾ !

**ಸೆಳೆ ಸೀರೆ ಅಕ್ಷಯವಾದ ನಂತರ ಕೌರವ**

ದೈವವೀ ದ್ರೌಪದಿಗೆ ಸೀರೆಯ
ನೀವುದಲ್ಲದೆ ಬಿಡಿಸಲಾಪುದೆ
ದೈವ ತೊತ್ತಿರ ಹುರುಡುಗೆಲಸದ ಹಿಂಡುಕೂಟದಲಿ ||
ದೈವವಿವಳಿಗೆ ತಾನಲೇ ತ
ನ್ನೈವ ರಿಕ್ಕಿದ ಮಾತು !

### ವೈಶಂಪಾಯನ ಸರೋವರದಲ್ಲಿ ಹೊಕ್ಕಿದ್ದ ದುರ್ಯೋಧನನನ್ನು ಭೀಮ ಮೂದಲಿಸುವುದು

ಭೀಮನೆನೆ ಭುಗಿಲೆಂಬ ರೋಷದ
ತಾಮಸವ ಬೀಳ್ಕೊಟ್ಟೆಲಾ ನಿ
ರ್ನಾಮವಾಯಿತೆ ಬಿರುದು ಪಾಂಡವ ತಿಮಿರ ರವಿಯೆಂಬ ||
ಭೀಮವನ ದಾವಾಗ್ನಿ ಹೊರವಡು
ಭೀಮ ಭಾಸ್ಕರ ರಾಹು ಹೊರವಡು
ಭೀಮಗರ್ಜನೆ ಮಧುರ ಗೀತವೆ ನೃಪತಿ ಬಾರೆಂದ ||

### ದುಶ್ಶಾಸನನನ್ನು ಮೆಟ್ಟಿಕೊಂಡು ಭೀಮ

ಎತ್ತಿ ಕಳೆದಿರಿ ಬನಕೆ ನಾವ್ ನಿ
ಮ್ಮೆತ್ತುಗಳಲಾ ಬೀದಿಯಲಿ ಬೆಂ
ಬತ್ತಿ ಕೊಂಕಿಸಿ ಬೆರಳೊಳೇಡಿಸಿ ಬೈದು ಭಂಗಿಸಿದೈ ||
ತೊತ್ತಲಾ ಪಾಂಚಾಲೆ ಸೀ ತಲೆ
ಗುತ್ತಲೇತಕೆ ಹಿಂದೆ ಕಿಚ್ಚಿನ
ತುತ್ತು ವಿಷದುಬ್ಬಟೆಗಳನು ನೆನೆಯೆಂದನಾ ಭೀಮ ||

### ಸೌಗಂಧಿಕ ಪುಷ್ಪವನ್ನು ತೆಗೆದುಕೊಂಡು

ತಿರಿದು ತಾವರೆವನವ ಕಕ್ಷ†ದೊ † ಕಂಕುಳು
ಳಿರಿಕಿ ಗದೆಯನು ಕೊಂಡು ಸರಸಿಯ
ಹೊರವಳಯದಲಿ ನಿಂದು ಕಾಹಿನ ಯಕ್ಷರಾಕ್ಷಸರ ||
ಒರಲಿ ಕರೆದನು ನಿಮ್ಮ ಕೊಳನಿದೆ
ಬರಿದೆ ದೂರದಿರೆಮ್ಮ ನೆನುತಾ
ಸರಿನ ಮಾತಿನ ನಲವಿನಲಿ ಮರಳಿದನು ಕಲಿಭೀಮ ||

**ತನ್ನ ಸಹಾಯವನ್ನು ಕೋರಿಬಂದ ಪಾರ್ಥ ಕೌರವರಿಗೆ ಕೃಷ್ಣ**

ಹಸುಳೆತನ ಮೊದಲಾಗೆ ಬಲುರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದು ಕೊಂದೆವು ಕೋಟಿದಾನವರ ||
ಮಿಸುಕಲಾರೆವು ಚಕ್ರ ಭಂಡಾ
ರಿಸಿತು ಮುನ್ನಿನ ಜವ್ವನದ ಬಲ
ಮುಸುಳಿತಾವುಂಡಾಡಭಟ್ಟರು ನೃಪತಿ ಕೇಳೆಂದ ||

---

# ೬. ಸಮಾಪ್ತಿ

ಸ್ಥಿತಿ ಸಂದರ್ಭ ಸನ್ನಿವೇಶಗಳನ್ನು ಘನವಾಗಿ ಕಲ್ಪಿಸಿಕೊಂಡು ಅವನ್ನು ವಿಶದವಾಗಿಯೂ ಮನೋಹರವಾಗಿಯೂ ಬಣ್ಣಿಸುವುದೆಂದರೆ ಕುಮಾರವ್ಯಾಸನಿಗೆ ಬಹಳ ಆಸಕ್ತಿ. ಆ ಕಾರ್ಯದಲ್ಲಿ ಅವನು ತೋರಿಸುವ ಜಾಣ್ಮೆಯನ್ನೂ ಮಹತ್ವವನ್ನೂ ಸ್ಪಷ್ಟಪಡಿಸುವ ಕೆಲವು ನಿದರ್ಶನಗಳನ್ನು ಇಲ್ಲಿ ಕೊಟ್ಟಿದೆ. ಭಾರತದ ಇತರ ಒಂದೆರಡು ಪಾತ್ರಗಳ ಸ್ವಭಾವ ಸ್ವರೂಪಗಳನ್ನೂ ಅಲ್ಲಿ ಕೊಂಚ ಕಾಣಬಹುದು.

**ಅಭಿಮನ್ಯು ಸತ್ತಾಗ**

ಕಡುಶೋಕ ಜಠರದಲುರವಣಿಸ ಲಾಕಸ್ಮಿಕದ ಭಯ
ವಾಯ್ತು ಪಾರ್ಥಂಗೆ. ಶಿವ ಶಿವ ವಾಸುದೇವ ಎನುತ ಜಲವ
ಬಗಿದೆದ್ದು, ಮಾಯಾವೇಷಿಯನು ಕರೆದನು ವಿಲೋಚನ ವಾರಿ

ಪೂರದಲಿ. ತರಣಿ ತೊಲಗಿದ ಗಗನವೋ ಕೇಸರಿಯ ಲೀಲಾ
ಳಾಪವಿಲ್ಲದ ಬಹಳ ಕಾನನವೋ ನಿರ್ಭರ ಭಯಂಕರವಾಯ್ತು
ಪಾಳೆಯವೆನುತ ನಡೆತಂದ.

ತಲೆಯ ಮುಸುಕಿನ ವೀರ ಸುಭಟರು
ತೊಲಗಿದರು ಬೆಸಗೊಳಲು ನಂದನ
ನಳಿವು ಹಲಬರ ಮನವ ಮೆಚ್ಚಿತು ಹೆಚ್ಚಿತತಿವೋಹ ||

ತನಗಿಂದು ಗತಿಯೇನೆನುತ ಬಂದನು ರಾಜಮಂದಿರಕೆ.

ಸುರನಗರಿ ನಡುಗಿತು ಸುರೇಶ್ವರ
ಹರನ ನೆನೆದನು ಯಮನ ಪಟ್ಟಣ
ಸರಕುದೆಗೆಯಿತು ಮೃತ್ಯು ಮರೆಹೊಕ್ಕಳು ಮಹೇಶ್ವರನ ||

ನರನ ಕಡುದುಮ್ಮಾನ ನೆರೆಯಂಜಿಸಿತು ಮೂಜಗವ ||

ಹರಿ ರಥವ ನಿಳಿದಂತೆ ಪಾರ್ಥನ
ಭರದ ಕೋಪವ ಕಂಡು ನಿಜ ಮಂ
ದಿರಕೆ ಮೆಲ್ಲನೆ ಜುಣುಗಿದನು ಯಾದವರ ಗಡಣದಲಿ ||

ನಾರಿಯರ ರತುನಾರತಿಯ ತಳಿಗೆಗಳ ನೂಕಿಸುತ, ಶಸ್ತ್ರಾಸ್ತ್ರ
ಕವಚವ ನಿರಿಸಿ ಕೈಗೊಡುವವರ ಕನಲುತ್ತ, ಅರಮನೆಯ
ಹೊಕ್ಕನು ಯುಧಿಷ್ಠಿರರಾಯನೋಲಗವ. ಧರಣಿಪನ ನಿರಿಗೆ†
ಯಲಿ ಕಂದನ ಮರಣವನು ನಿಶ್ಚಯಿಸಿ, †ಇರುವಿಕೆ

ತಂದೆ ನಿನಗೆನ್ನಲ್ಲಿ ಋಣ ಸಂ
ಬಂಧ ಸವೆದುದೆ ಶಿವ ಶಿವಾ ತಾ
ಮಂದಭಾಗ್ಯಂ ಗಣುಗ ದಕ್ಕುವನಲ್ಲ ತನಗೆಂದ ||

ಸೈಂಧವ ಹರನ ವರದಲಿ ನಮ್ಮ ಗೆಲಿದನು ಮರಣವನು ಕಂದಂಗೆ ತಂದವನವನು ಕೇಳೆಂದು ;

ಇನ್ನು ಹೇಳುವುದೇನೆನುತ ಕೈ
ಸನ್ನೆಯಲಿ ಮಾತಾಡಿ ಭೂಪತಿ
ಬೆನ್ನ ತೆತ್ತನು ಭೀಮಸೇನನ ವಿಪುಲ ವಕ್ಷದಲಿ ||

ಪುತ್ರವಿರಹದ ಹೆಚ್ಚಿಗೆಯ ತಾಪವನು ಹೆಸರಿಡಲರಿಯೆ ನರ್ಜುನನ !

ಮನವುರುಗಿ ಮೈಮರೆದು ತಾಪದಿ
ಕನಸ ಕಂಡನು ಝಡಿಕೆ* ಮಿಗೆ ಝೊ *ಹೊಡೆತ
ಮ್ಮಿನ ಸುಷುಪ್ತಿಯೊಳಿದ್ದು ನಿಮಿಷದೊಳಿದ್ದು ಕಣ್ತೆರೆದ ||

ಅಳಲ ಮುಕ್ಕುಳಿಸಿದನು ಮೋಹದ
ಬೆಳವಿಗೆಯ ಗವಸಣಿಸಿದನು§ ಕಳ §ಮುಚ್ಚಿದನು
ಕಳಿಕೆ† ಹಿಂಗಿದುವಶ್ರುಜಲವನು ಕಂಗಳಲಿ ಕುಡಿದು ||†ಧೀವಂತ
ಪ್ರಳಯರುದ್ರನ ಕೋಪ ಶಿಖಿ ವೆ
ಗ್ಗಳಿಸಿತೆನೆ ಕಂಗಳಲಿ ಕಿಡಿಗಳು
ತುಳುಕಿದುವು ರೌದ್ರಾನುಭಾವದ ರಸದ ಭಂಗಿಯಲಿ ||

ಹೇಳು ಹೇಳಿನ್ನೊಮ್ಮೆ ಮಾರಿಯ
ಮೇಳವಾಡಿದನೇ ಜಯದ್ರಥ
ನಾಳುತನವನು ಸಮರದಲಿ ನಮ್ಮೊಡನೆ ತೋರಿದನೆ ||

ಉರಗಭುವನದೊಳಿರಲಿ, ಮೇರು ಸಾಗರದ ಮುಳುಗಲಿ, ರವಿಯ ಮರೆಹೊಗಲಿ, ಬ್ರಹ್ಮನ ಕರಕಮಂಡಲದೊಳಗೆ ಹುದುಗಲಿ, ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ.

ನಾಳೆ ಖಚರೀಜನ*ವ ತೊಡವಿನ *ಅಪ್ಸರಃಸ್ತ್ರೀ
ತೋಳನವನಸು ನೆಮ್ಮದಿದ್ದರೆ
ಕಾಳೆಗದೊಳೆನ್ನೊಡಲ ಬಿಸುಡುವೆ ನಗ್ನಿಕುಂಡದಲಿ ||
ಕೇಳು ಧರ್ಮಜ ಯೆಂಬ ನುಡಿಯದು
ಕಾಳೆಗದ ಸೊಗಸಾಗೆ ಲಕ್ಷ್ಮಿಶ್ರೀ
ಲೋಲ ಕೇಳುತ ಬಂದು ಪಾರ್ಥನ ಬಿದುವ ಹೊಗಳಿದನು ||

## ಕರ್ಣ ದುರ್ಯೋಧನರ ಸ್ನೇಹ

ಬಂದ ಹಸ್ತಿನಪುರಿಗೆ ರಾಧಾ
ನಂದನನು ದುರ್ಯೋಧನನ ಸ್ನೈ
ತಂದು ಕಂಡನು ಕೌರವೇಶ್ವರನಿವರ ಕಾಣಿಸಿದ ||
ಅಂದು ಮೊದಲಾದವರ ಸಖ್ಯಕೆ
ಸಂದ ಕಾಣೆನು ಕರ್ಣ ಕುರುಪತಿ
ಗೊಂದೆ ಜೀವನ ಪೊಂದೆ ಮನ ಮತವೊಂದೆ ಕೇಳೆಂದ ||

ಬೇಟೆ ಕರ್ಣನ ಕೂಡೆ ಹಗಲಿರು
ಳಾಟ ಕರ್ಣನ ಕೂಡೆ ಷಡುರಸ
ದೂಟ ಕರ್ಣನ ಕೂಡೆ ಶಸ್ತ್ರಾಭ್ಯಾಸ ವವ ಗೂಡೆ ||
ತೋಟ ಮನದಲಿ ನಗೆಯು ಮಧುರದ
ನೋಟ ಕಣ್ಣಿನೊ ಳುಳಿದವರ ಕೂ
ಡಾಟಗಳು ತಾವಿಬ್ಬರೊಂದೆನಿಸಿದರು ಜಗವರಿಯೆ ||

## ಕೃಷ್ಣ ಬಂದು ಕರ್ಣನಾರೆಂಬುದನ್ನು ಅವನಿಗೆ ಹೇಳಿದಾಗ

ಕೊರಳ ಸರೆ ಹಿಗ್ಗಿದುವು ಮೃಗುಜಲ
ವುರವಣಿಸಿ ಕಡುನೊಂದ ನಕಟಾ
ಕುರುಪತಿಗೆ ಕೇಡಾಮುದೆಂದನು ತನ್ನ ಮನದೊಳಗೆ ||

ಹರಿಯ ಹಗೆ ಹೊಗೆದೋರ ದುರುಪದಿ
ಬರಿದೆ ಹೋಹುದೆ ತನ್ನ ವಂಶವ
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ||

ಕುಂದಿ ಕೊಲುವಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೊಗಲಿಲ್ಲ ||
ಭೇದದಲಿ ಹೊಕ್ಕಿರಿದನೋ ಮಧು
ಸೂದನನು ತಾನಕಟಿನುತ ಘನ ಚಿಂ
ತೋದಧಿಯಲದ್ದವೊಲು ಮೌನದೊಳಿದ್ದನಾ ಕರ್ಣ ||

ಮರುಳು ಮಾಧವ ಮಹಿಯ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಕೈವಲ್ಲಿ ಮನವಿಲ್ಲ ||
ಹೊರೆದ ದಾತಾರಂಗೆ ಹಗೆವರ
ಶಿರವ ನರಿದೊಪ್ಪಿಸುವೆ ನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ||

ವೀರ ಕೌರವರಾಯನೇ ದಾ
ತಾರ ನಾತನ ಹಗೆಯೆ ಹಗೆ ಕೈ
ವಾರವೇ ಕೈವಾರ ವಾದಂತಹೆನು ಕುರುನೃಪತಿ ||

ನೋಡಿ ದಣಿಯನು ಬಿರುದ ಹೊಗಳಿಸಿ
ಹಾಡಿ ತಣಿಯನು ನಿಚ್ಚಲುಚಿತವ
ಮಾಡಿ ತಣಿಯನು ಮಾನನಿಧಿಯನದೆಂತು ಮರೆದಪೆನೊ ||

ಕಾಡಲಾಗದು ಕೃಷ್ಣ ಖಾತಿಯು
ಮಾಡಲಾಗದು ಬಂದೆನಾದರೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆಂದ ||

ಮಾರಿಗೌತಣವಾಯ್ತು ನಾಳೀ
ಭಾರತವು ಚತುರಂಗ ಬಲದಲಿ
ಕೌರವನ ಋಣ ಹಿಂಗೆ ರಣದಲಿ ಸುಭಟ ಕೋಟಿಯನು ||
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ವೀರರೈವರ ನೋಯಿಸೆನು ರಾಜೀವ ಸುಖನಾಣೆ ||

## ಕರ್ಣನ ಸಾವು

ಕಳಚಿ ದುರ‍್ಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ನಿಖಿಳೈಶ್ವರ್ಯ ವಿಳೆಗೋಲ್‌ಗುಡಿಸಿ ಕೆಡೆದಂತೆ ||
ಥಳಥಳಿಪ ನಗೆಮೊಗದ ಬಿಗುಹೆ
ಕ್ಕಳದ ಹುಬ್ಬಿನ ಬಿಟ್ಟ ಕಂಗಳ
ಹೊಳೆವ ಹಲುಗಳ ಕರ್ಣಶಿರ ಕೆಡೆದುದು ಧರಿತ್ರಿಯಲಿ ||

ಕೊಟ್ಟ ಭಾಷೆಯ ಮೀರಿ ಬಾಣವ
ತೊಟ್ಟನೇ ತಾನೊಡೆಯನೆಂದರೆ
ಅಟ್ಟಿದನೆ ಪಾಂಡವರೊಳನುಸಂಧಾನವನು ಬಿಸುಟು ||
ನಟ್ಟ ಕಣೆಗಳುಕಿದನೆ ಕೌರವ
ಕೆಟ್ಟ ನಕಟಕಟೆಂದು ಕಾಯುವ
ಬಿಟ್ಟ ಕರ್ಣಂಗಾರು ಸರಿಯೆನುತಿರ್ದುದಮರಗಣ ||

ಕರ್ಣ ಹಾ ಎನ್ನಾನೆ ಹಾ ಬಹಿರಂಗ ಜೀವನನೆ ||

ರಾಯ ಹಂಪ್ವೈಸಿದನು ಹಾ ರಾ
ಧೇಯ ಹಾಯೆನ್ನಾನೆ ಬಾರೈ
ಮಾಯವಾಗದೆ ನಿನ್ನ ತೋರಾ ಕರ್ಣ ತೋರೆನುತ.||

ನರಗೆ ಸೈರಣೆಯೆಲ್ಲಿಯದು ಕರಿ
ತುರಗ ಕಂಬನಿಗರೆದುವೈ ತರ
ತರದ ಶೋಕಾಂಬುಧಿಯ ಲುಳಿಯಲಿ ಸಿಲುಕಿತರಿಸೇನೆ ||
ಅರಸ ಕೇಳಾಚೆಯಲಿ ಭೀಮನು
ವರ ನಕುಲ ಸಹದೇವ ನರ್ಜುನ
ಧರಣಿಪತಿ ದ್ರೌಪದಿಯ ಚಿಂತೆ ದುರಂತವಾಯ್ತೆಂದ ||

ಮರುಗುವರು ಪಾಂಡವರು ಕರ್ಣನ
ಮರಣದಲಿ ಯಡಿಗಡಿಗೆ ಮಿಗೆ ಸೋ
ದರದ ಸಂಬಂಧದಲಿ ಹೆಚ್ಚಿತು ಮನದ ಸಂತಾಪ ||
ಬೆರಸಿತಕಟಾ ಯೆನುತ ಮುರರಿಪು
ಕರಗಿ ದಂತಃಕರಣದಿಂದವೆ
ನೆರೆ ಮರುಗಿ ಪಾಂಡವರ ಸಲಹಿದ ವೀರನಾರಯಣ ||

## ಕೌರವನ ಅವಸಾನವಾದ ನಂತರ

ಕದನ ವಿಜಯದ ಭಂಗಿ ತಲೆಗೇರಿದುದು; ಸಾಕು ಕರೆ ಧರ್ಮವಿಡಂಬದ ಧರ್ಮಪುತ್ರನ; ಹದನ ಕೇಳುವೆವೆಂದು ಕಳವಳಿಸಿದಳು ಗಾಂಧಾರಿ. ಹರಿವಿದುರ ಸಂಜಯರು ಪಾರಾಶರಿ ಮಹೀಪತಿ ಭೀಮ ಮಾದ್ರೇಯರು ಧನಂಜಯ ಸಹಿತ ಬಂದರು ಬಹಳ ವಿನಯದಲಿ; ಪದಕೆರಗಿದರು ಭೀತಿಯಲಿ.

ಏಳಿರೈ ಸಾಕೇಳಿ ಮಕ್ಕಳಿ
ರೇಳಿರೈ ದೇಸಿಗರು ನಾವ್ ಭೂ
ಪಾಲಕರು ನೀವೀಸು ನಮ್ಮಲಿ ಭೀತಿ ನಿಮಗೇಕೆ ||
ಬಾಲೆಯರು ನಾವಂಧಕರು ನಿ
ಮ್ಮಾಳಿಕೆಯೊಳೇ ನಿಮ್ಮ ಹಂತಿಯ
ಕೂಳಿನಲಿ ಬೆಂದೊಡಲ ಹೊರೆವವಳೆಂದಳಬುಜಾಕ್ಷಿ ||
ಮುನಿಯದಿರು ಗಾಂಧಾರಿ ದಿಟ ನಿ
ನ್ನನುಜ ನಿಕ್ಕಿದ ಸಾರಿ ನಿನ್ನಯ
ತನುಜರನು ನಿನ್ನಖಿಳ ಮಿತ್ರ ಜ್ಞಾತಿ ಬಾಂಧವರ ||
ಮನುಜಪತಿಗಳನಂತವನು ರಿಪು
ಜನಪ ಶರವಹ್ನಿಯಲಿ ಬೇಳಿದ
ನಿನಿತು ಶೋಕೋದ್ರೇಕ ನಿನಗೇಕೆಂದನಾ ಮುನಿಪ ||
ತಾಯೆ ಬಾ ಗಾಂಧಾರಿ ಮನದಲಿ
ನೋಯದಿರು ಪೌರಾಣ ಜನ್ಮದ
ದಾಯಭಾಗದ ಭೋಗ ಭಂಗಿಸ ಲಳುಕಲೇಕಿನ್ನು ||
ಸಾಯಲಾಗದೆ ಸುಭಟರಸುಗಳು
ಬೀಯವೇ ಬ್ರಹ್ಮಾದಿಗಳಿಗಿದು
ವಾಯವೀ ಸಂಸಾರವೆಂದನು ನಗುತ ಮುರವೈರಿ ||
ತಾಯೆ ಖತಿ ಬೇಡಿನ್ನು ಧರಣಿಗೆ
ರಾಯನೇ ಧೃತರಾಷ್ಟ್ರ ನಾತನ
ಬಾಯದಂಬುಲ ಬೀಳುಡೆಯ ಬಲದಿಂದ ಬದುಕುವೆವು ||
ತಾಯೆ ನೀವೆಂದೆಮಗೆ ಕುಂತಿಯ
ತಾಯತನವಂತಿರಲಿ ಕರುಣಿಸಿ
ಕಾಯಬೇಕೆಂದರಸ ಮಗುಳೆರಗಿದನು ಚರಣದಲಿ ||

ಶಾಪವನು ನೀ ಹೆಸರಿಸೌ ಸ
ರ್ವಾಪರಾಧಿಗಳಾವು ನಿಮ್ಮಯ
ಕೋಪ ತಿಳಿಯಲಿ ತಾಯೆ ಫಲಿಸಲಿ ಬಂಧುವಧೆ ನಮಗೆ |
ನೀ ಪತಿವ್ರತೆ ನಿನ್ನ ಖತಿ ಜೀ
ವಾಪಹಾರವು ತನಗೆ ನಿಮ್ಮನು
ತಾಪವಡಗಲಿ ಯೆನ್ನನುಳುಹೆಂದೆರಗಿದನು ಪದಕೆ ||

ನನೆದುದಂತಃಕರಣ ಕರುಣಾ
ವಿನುತ ರಸದಲಿ ಖತಿಯ ಝಳ ಝೊ
ಮ್ಮಿನಲಿ ಜರಿದುದು ಜಾರಿತಗ್ಗದ ಪುತ್ರಶತಶೋಕ ||

ಖ್ಯಾತಿಯಲಿ ನೀವಿನ್ನು ಪಾಲಿಸಿ ಭೂತಳವನೆಂದಳು ನೃಪಗೆ ಗಾಂಧಾರಿ.

ಈ ತೆರದಿ ಪಾಂಡವರ ಸಲಹಿದ ಪೀತವಸನ ಮುಕುಂದ ಕಂಸಾರಾತಿ ಕೃಷ್ಣನ ಚರಿತಪೀಯೂಷವನು ನಲಿನಲಿದು ಸೂತ ಮುನಿ ಪೇಳಿದನು; ಜಗದಘವ ಸಂಹರಿಸಲ್ಕೆ ಕೃತಿಯೆನಿಸಿ ಹರಹಿದನು ತ್ರೈಲೋಕ್ಯದಲಿ ವೇದವ್ಯಾಸಮುನಿ.

